ಸಾಹಿತ್ಯ ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ



**ಕೊಡು - ಕೊಳ್ಳುವಿಕೆಗಳ ಸಂಕರ ...**

ಬೆಲೆ : 10 ರೂ

ಸಂಪುಟ : 1 ಸಂಚಿಕೆ : 2 ಫೆಬ್ರವರಿ 2013

# ಪ್ರತಿಸ್ಪಂದ

ಫೆಬ್ರವರಿ 2013
ಸಂಪುಟ : 1 ಸಂಚಿಕೆ :2



**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ.ಮೇಲ್ : prathispandha@gmail.com



**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಮುಖಪುಟ ವಿನ್ಯಾಸ ಕೃಪೆ:**
ಅಂತರ್ಜಾಲ

**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಪುಟವಾಗಿ ಬರೆಯಿರಿ.


**ಒಳಪುಟಗಳಲ್ಲಿ**

# ನಿಮ್ಮೊಂದಿಗೆ....

**"ಕಾರ ಮೇಘವೆದ್ದು ಧಾರಾವರ್ತ ಸುರಿವಾಗ
ಧಾರಣಿಯೆಲ್ಲವೂ ಮುಳುಗಿತ್ತು ನೋಡಾ
ಕಾರಿರುಳ ಕಣ್ಣೊಳಗೆ ಸೂರ್ಯರನೇಕರು ಮೂಡಿ
ದಾರಿಯ ಹೊಲಬೆಂಬುದು ಕೆಟ್ಟಿತ್ತು ನೋಡಾ
ಘೂರಾಯ ಗಾಯದಲ್ಲಿ ಸಾಯಕೊಂದಲ್ಲದೆ
ಸೂರ್ಯರನೇಕರು ಮಡಿಯರು ಗುಹೇಶ್ವರಾ"**

ಡಿ.ಆರ್. ನಾಗರಾಜ್ ತಮ್ಮ 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಕೃತಿಯಲ್ಲಿ ಈ ವಚನವನ್ನು ಕುರಿತು ಹೇಳುವಾಗ "ಅಲ್ಲಮನ ಮರಣಮೀಮಾಂಸೆ ಮೂಲತಃ ಒಂದು ರೂಪಕದ ಮೀಮಾಂಸೆ" ಎಂದು ವಿಶ್ಲೇಷಿಸುತ್ತಾರೆ.

ಪ್ರತಿಮೆಗಳಿಗೆ ಸಮೃದ್ಧವಾದ ಶಕ್ತಿಯಿರುತ್ತದೆ. ಬಗೆದಷ್ಟೂ ಬತ್ತದ ಜೀವಜಲ ವಿರುತ್ತದೆ. 'ಸೂರ್ಯರನ್ನು ಕೊಲ್ಲುವುದು' ಎಂಬ ಇಂತಹ ರೂಪಕಗಳ ಸೃಷ್ಟಿಗೆ ಬೇಕಾದದ್ದು ಆದಿ-ಅಂತ್ಯ, ಸಾವು-ಬದುಕು, ಒಳ್ಳೆಯದು-ಕೆಟ್ಟದು, ವಾಸ್ತವ-ಅವಾಸ್ತವ ಎಂಬ ದ್ವಂದ್ವ ಗ್ರಹಿಕೆಗಳನ್ನು ಸಹಜವಾಗಿ ಒಪ್ಪಿಕೊಳ್ಳುವ ಮನಸ್ಥಿತಿ - ಎಮಿಲಿ ಡಿಕಿನ್ಸನ್ ಸಾವನ್ನು ನಲ್ಲನಂತೆ ತಿಳಿಯುವ ಹಾಗೆ.

ಅಮೇರಿಕಾದಂತ ಸೂಪರ್ ಪವರ್ ರಾಷ್ಟ್ರಗಳು ಲ್ಯಾಟಿನ್ ಅಮೇರಿಕಾ/ಆಫ್ರಿಕಾ ದೇಶಗಳ ಅಸ್ತಿತ್ವಗಳನ್ನು ಅಳಿಸಿ ಹಾಕಲು ಪ್ರಯತ್ನಿಸಿದಾಗ, ತಮ್ಮ ಜೀವನವನ್ನು ಅವರಿಗೆ ಬೇಕಾದಹಾಗೆ ಗ್ರಹಿಸಿಕೊಳ್ಳಲು ಅವಕಾಶವಾಗದಂತೆ ಅಲ್ಲಿನ ಸಾಹಿತಿಗಳು ತಮ್ಮ ಬದುಕಿನ ವಾಸ್ತವವನ್ನು ಸಾಹಿತ್ಯದ ರೂಪಕ/ಶೈಲಿಗಳ ಮೂಲಕ ಕಟ್ಟಿಕೊಂಡರೀತಿ ರಕ್ತರಹಿತ ಕ್ರಾಂತಿಗಳಿಗೆ ನಾಂದಿಹಾಡಿದೆ. ಅಧಿಕಾರದ ದರ್ಪಕ್ಕೆ ಪ್ರತಿಮೆ/ರೂಪಕಗಳು ಉತ್ತರ ನೀಡಿವೆ. ಮಾರ್ಕ್ವೆಜ್‌ನ ಕತೆಗಳನ್ನು ಗ್ರಹಿಸಲು ಸಾಧ್ಯವಾಗಬೇಕೆಂದರೆ ಅಲ್ಲಿನ ಸಮುದಾಯದ ಬದುಕನ್ನು ಗೌರವಿಸುವುದನ್ನು ಮೊದಲು ಕಲಿಯಬೇಕಾಗುತ್ತದೆ. ಇಂತಹ ಸಾಮುದಾಯಿಕ ಪ್ರಜ್ಞೆಯನ್ನು ಗೌರವಿಸುವುದರಲ್ಲಿಯೇ ಸಾಹಿತ್ಯ ಹುಟ್ಟುವುದು. ವಾಲ್ಟರ್ ಬೆಂಜಮಿನ್ ನ ಕತೆಗಾರರು ಈ ದಿಕ್ಕಿನ ಪ್ರಯಾಣಿಕರು. ಏಕತಾನತೆಯ ಕೆಲಸಗಳಲ್ಲಿ ಬೇಸರದ ಹಕ್ಕಿಗಳನ್ನು ಪೋಷಿಸುವವರು. ರೂಪಕಗಳಿಗೆ ರಾಜಮರ್ಯಾದೆ ನೀಡುವವರು. ವಚನಕಾರರೂ ಸಹ ಇವರ ಜೊತೆಯವರೆ.

ಮಾರುಕಟ್ಟೆ ಆಧಾರಿತ ಆರ್ಥಿಕತೆಯು ಸಾಹಿತ್ಯ ಸೃಷ್ಟಿಯ ಅನೇಕ ಶಾಂತ ಕ್ಷಣಗಳನ್ನು ಕೊಲ್ಲುತ್ತದೆ. ಅದಕ್ಕೆ ಸಾವೆಂದರೆ ಜಡತೆ. ಏಕತಾನದ ಕೆಲಸಗಳೆಂದರೆ ಬೇಸರ. ಜೀವಂತ ಮನುಷ್ಯರನ್ನು ಗ್ರಾಹಕರನ್ನಾಗಿ ಮಾಡಲು ಏನೆಲ್ಲಾ ಮಾಡಬಹುದೋ ಅದನ್ನೆಲ್ಲಾ ಈ ವ್ಯವಸ್ಥೆಯು ಎತ್ತಿಹಿಡಿಯುತ್ತಿರುತ್ತದೆ. ಈ ಸಂಚಿಕೆಯಲ್ಲಿ ಜೀವಂತ ಮನುಷ್ಯರ ಕೆಲವು ಮಾದರಿಗಳಿವೆ. ಭ್ರಮೆ ನಮ್ಮನ್ನು ಆವರಿಸದಿರಲಿ ಎಂದು ಬಯಸುತ್ತಾ, ವಂದನೆಗಳು.

**- ಸಂಪಾದಕ**

ಜೀವನ ಲಹರಿ

# ಜೀವಜಾಲದ ಅಳಿವು-ಉಳಿವು

'ಜಗತ್ತೂ ಸ್ಥಿರ, ತಾನೂ ಸ್ಥಿರ' ಎಂಬ ಭ್ರಮೆಯಿದೆ. ಆದರೆ ಯಾವುದೂ ಸ್ಥಿರವಲ್ಲ. ಎಲ್ಲವೂ ಚಲನಶೀಲ. ಮನುಷ್ಯನ ಸ್ವಾರ್ಥದ ಉದ್ದೇಶಕ್ಕೆ ಪ್ರಕೃತಿ ಮತ್ತು ಪರಿಸರ ಲೂಟಿಯಾದರೆ ಜೀವ ಜಾಲಕ್ಕೆ ಕುತ್ತು ತಂದಂತೆ; ಆತ್ಮಹತ್ಯೆಯ ದಾರಿ ಹಿಡಿದಂತೆ. ವಿಜ್ಞಾನದ ಸಂಶೋಧನೆಗಳು, ಯಂತ್ರ-ತಂತ್ರಜ್ಞಾನಗಳ ಪ್ರಗತಿ ಮನುಷ್ಯನಿಗೆ ತನ್ನ ಆಸೆಗಳನ್ನು ಪೂರೈಸಿಕೊಳ್ಳಬಹುದೆಂಬ ಭರವಸೆ ಮೂಡಿಸಿವೆ. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ವಿವೇಚನೆಯಿಂದ ಸೂಕ್ತರೀತಿಯಲ್ಲಿ ಬಳಸಿ ಕೊಳ್ಳಬೇಕಿದೆ. ಈ ಜ್ಞಾನ ದುರುಪಯೋಗವಾದರೆ ಭೂಮಿ ಬರಡಾಗುತ್ತದೆ, ಅಂತರ್ಜಲ ಬತ್ತುತ್ತದೆ, ಗುಡ್ಡ-ಅರಣ್ಯಗಳು ಕಣ್ಮರೆಯಾಗುತ್ತವೆ. ಖಗ-ಮೃಗ, ಪಶು-ಪಕ್ಷಿ ಸಂಕುಲಗಳು ನಶಿಸುತ್ತವೆ. ನದಿಗಳು ಇಲ್ಲವಾಗುತ್ತವೆ. ಜನದಟ್ಟಣೆಯಿಂದ ನಗರಗಳು ಕೊಳೆಗೇರಿ ಗಳಾಗುತ್ತವೆ. ಹಳ್ಳಿಗಳು ಹಾಳು ಬೀಳುತ್ತವೆ. ಕೈಗಾರಿಕೆ ಮತ್ತು ವಾಹನಗಳು ಉಗುಳುವ ಇಂಗಾಲದಿಂದ ವಾತಾವರಣ ವಿಷವಾಗುತ್ತದೆ. ಪರಿಣಾಮವಾಗಿ ಋತುಮಾನಗಳು ಬದಲಾಗುತ್ತಿವೆ. ಪರಿಸರ ಹಾಳಾಗುತ್ತಿದೆ. ಅಕಾಲಿಕ ಮಳೆ, ಇಂಗಾಲದ ಮಳೆ, ಪ್ರವಾಹ, ಹಿಮಸುರಿಯುವಿಕೆ, ಕೊರೆವ ಚಳಿ, ಬರಬಿಸಿಲು, ಬರಗಾಲ, ಜಲಕ್ಷಾಮ ಹಾಗು ನೀರು, ಗಾಳಿ, ಮಣ್ಣು ಕಲುಶಿತವಾಗುವುದು. ಈ ಸಂಕಷ್ಟಗಳಿಗೆ ಪರಿಹಾರವಿಲ್ಲವೇ?

ಪ್ರಕೃತಿ ಮತ್ತು ಪರಿಸರದ ಅಸ್ತಿತ್ವದ ಹೊರಗೆ ಜೀವಕ್ಕೆ ಉಳಿಗಾಲವಿಲ್ಲ. ಅದರ ಅಂಗವಾಗಿ, ಭಾಗವಾಗಿಯೇ ಇರಬೇಕಾದದ್ದು ಅನಿವಾರ್ಯ. ಜೀವನ, ಅಂತಃಸಂಬಂಧವೆಂದು ಅರಿತು ರೂಪಿಸಿ ಕೊಳ್ಳಬೇಕಿದೆ. ಸಸ್ಯ-ವೃಕ್ಷ ಸಂಪತ್ತು ನಾಶವಾದರೆ ಜೀವಜಾಲವೇ ನಶಿಸುತ್ತದೆ. ಜೀವರಾಶಿಗೆ ಸೂರ್ಯ, ಚಂದ್ರ, ನಕ್ಷತ್ರ, ಆಕಾಶ, ಗ್ರಹಗಳು, ಪರ್ವತಗಳು ಸಂಬಂಧವಿದೆ. ಒಂದು ಮತ್ತೊಂದರೊಡನೆ ಅವಲಂಬಿತವಾಗಿ ಹೆಣೆದುಕೊಂಡಿದೆ. ವಿಶ್ವದ ಅಸ್ತಿತ್ವದ ಇರುವಿಕೆಯೇ ಅವಿನಾಭಾವ, ಪ್ರತ್ಯೇಕವಲ್ಲ. ಸಮೃದ್ಧ ಜೀವನಕ್ಕೆ ಬೇಕಾಗಿರುವುದು ಒಡೆತನವಲ್ಲ, ಯಜಮಾನಿಕೆ-ಯಲ್ಲ, ಪರಸ್ಪರ ಪೂರಕವಾದ ಸಂವೇದನಾಶೀಲತೆ, ಸೂಕ್ಷ್ಮಗ್ರಹಿಕೆ, ಪರಿವರ್ತಿಸಿ ಕೊಳ್ಳುವ ಬುದ್ಧಿಚಾತುರ್ಯ ಪ್ರಕೃತಿ ಮತ್ತು ಪರಿಸರವನ್ನು ಅರಿತು ಬಳಸುವುದು.

ಪ್ರಸ್ತುತಕ್ಕೆ ಬುದ್ಧ ಭಿಕ್ಕುವಿನ ಒಂದು ಸುಂದರ ಕತೆಯಿದೆ. ಗುರು ಭಿಕ್ಕುವನ್ನು ಅನುಯಾಯಿಯೊಬ್ಬ ಸ್ವರ್ಗದ ಬಾಗಿಲಿನ ಕೀ ಬೇಕೆಂದು ಕೇಳಿದ. ಆ ಗುರು ಬಂಗಾರದ ಕೀಲಿ ಕೈ ಕೊಡುತ್ತಾ, "ನರಕದ ಬಾಗಿಲೂ ಕೂಡ ತೆರೆಯಲು ಇದೇ ಕೀಲಿ ಕೈ ಬಳಸಬೇಕು. ಬಾಗಿಲನ್ನು ಹುಷಾರಾಗಿ ಆಯ್ದುಕೋ" ಎಂದು ಹೇಳಿದರು. ವಿಜ್ಞಾನದ ತಿಳಿವಿನ ಕೀಲಿಕೈ ಸಿಕ್ಕಿದೆ ಎಂದು ವಿವೇಚನೆಯಿಲ್ಲದೆ ಬಳಸಿದರೆ ಒಳಿತಿಗಿಂತ ಕೆಡುಕೇ ಆಗುತ್ತದೆ.

ಒಂದು ವರದಿಯ ಪ್ರಕಾರ: ಶರಾವತಿ ಜಲವಿದ್ಯುತ್ ಯೋಜನೆ ಕಾರ್ಯಗತವಾಗುವ ಮುನ್ನ ಆ ಪ್ರದೇಶದಲ್ಲಿ ವಾರ್ಷಿಕ 320 ಇಂಚು ಮಳೆ ಬೀಳುತ್ತಿತ್ತು. ಯೋಜನೆ ಪೂರ್ಣಗೊಂಡ ಮೇಲೆ ಹರಿದ್ವರ್ಣದ ಕಾಡು, ವೈವಿಧ್ಯಮಯ ಅಪೂರ್ವ ಸಸ್ಯ ಸಂಪತ್ತು ನಾಶವಾಗಿದೆ. ಈಗ ವಾರ್ಷಿಕ 70ರಿಂದ 90 ಇಂಚು ಮಳೆಬೀಳುತ್ತಿದೆ. ವರ್ಷ ವರ್ಷಕ್ಕೆ ಕಡಿಮೆಯಾಗುತ್ತಿದೆ. ವಿದ್ಯುತ್ ಉತ್ಪಾದನೆಗೆ ಗಾಳಿ, ಸೂರ್ಯನ ಶಾಖ, ಸಮುದ್ರದ ಅಲೆ, ಸಸ್ಯಮೂಲ ಇತ್ಯಾದಿಗಳನ್ನು ಬಳಸಿಕೊಳ್ಳಬಹುದು. ಹಾಗೆಂದು ನೈಸರ್ಗಿಕ ವನಸಿರಿ ಹಾಳುಮಾಡುವುದು ಸಲ್ಲದು. ಏಕೆಂದರೆ, ಏನನ್ನಾದರೂ ಉತ್ಪಾದಿಸಬಹುದು, ಶುದ್ಧವಾದ ಮಳೆ ನೀರನ್ನು ಉತ್ಪಾದಿಸಲು ಸಾಧ್ಯವೇ? ಅರವತ್ತು ಎಪ್ಪತ್ತರ ದಶಕದಲ್ಲಿ ಬೃಹತ್ ಅಣೆಕಟ್ಟೆಗಳನ್ನು

ನಿರ್ಮಿಸಿದಾಗ, ದೇಶ ವಿಭಜನೆಯಾದಾಗ, ವಲಸೆ ಹೋದದ್ದಕ್ಕಿಂತ ಮೂರು ಪಟ್ಟು ಹೆಚ್ಚು ಜನ ಸ್ಥಳಾಂತರಗೊಳ್ಳಬೇಕಾಯಿತು. ಆದರೆ ಇಂದು ಬೃಹತ್ ಅಣ್ಣೆಕಟ್ಟುಗಳು ಹೂಳು ತುಂಬಿ ಅನುಪಯುಕ್ತವಾಗುತ್ತಿವೆ.

ಬದುಕು ಇರುವುದೇ ತನ್ನ ಉದ್ದೇಶ, ಗುರಿ, ಮಹತ್ವಾಕಾಂಕ್ಷೆ, ಕನಸುಗಳ ಸಾಕಾರಕ್ಕಾಗಿ ಎಂದು ತಿಳಿದಿರುವಂತಿದೆ. ಅದಕ್ಕೆ ತಕ್ಕಂತೆ ಶಿಕ್ಷಣ, ತರಬೇತಿಯಿದೆ. ಆದರೆ ಪಶು-ಪಕ್ಷಿ, ಖಗ-ಮೃಗ, ಜಲಚರಗಳು, ಸರೀಸೃಪಗಳು, ಕ್ರಿಮಿಕೀಟಗಳು ತಮ್ಮ ತಮ್ಮ ವಿಶಿಷ್ಟತೆಯಲ್ಲಿವೆ. ನಿಸರ್ಗದ, ಪರಿಸರದ ಲಯಕ್ಕೆ, ತಕ್ಕಂತಿವೆ. ನಿಸರ್ಗದಲ್ಲಿ ಸಾವಿರಾರು ವೈವಿಧ್ಯಮಯ ವೈಚಿತ್ರ್ಯಗಳಿವೆ, ಸೊಗಸುಗಳಿವೆ. ಉದಾಹರಣೆಗೆ ಹೂಗಳ ರಂಗು, ಸುಗಂಧ, ಮಧು, ಪಕ್ಷಿಗಳ ಹಾಡಿನ ಇಂಪು, ಹರಿಣದ ಓಟ, ನವಿಲಿನ ನಾಟ್ಯ, ಮೊಲದ ಮುಗ್ಧತೆ, ಮೃಗಗಳ ಆರ್ಭಟ, ದುಂಬಿಗಳ ಝೇಂಕಾರ, ಹರಿವ ಜಲಧಾರೆ, ಬೆಳದಿಂಗಳ ತಂಪು, ಮರಗಿಡಗಳ ಹಸಿರು, ಫಲ-ಪುಷ್ಪ, ನಕ್ಷತ್ರಗಳ ಮಿನುಗು, ಹರಿವನೀರಿನ ಅಲೆ, ಬಿಸಿಲಿನ ಸ್ಪರ್ಶ, ಶಕ್ತಿಯ ಸಂಚಾರ ಇತ್ಯಾದಿ ಪ್ರಕೃತಿಯ ಸಹಜ ಕ್ರಿಯೆಗಳ ಇರುವಿಕೆಯೇ ವಿಸ್ಮಯ, ರಹಸ್ಯ, ಸಂಭ್ರಮೋತ್ಸವ. ಇದನ್ನು ವಿವರಿಸಲಾಗದು. ಅನುಭವಗ್ರಾಹ್ಯ.

"ಭೂಮಿ ಮನುಷ್ಯನ ದುರಾಸೆಯನ್ನು ಪೂರೈಸಲಾರದಾದರೂ ಅವಶ್ಯಕತೆ ಪೂರೈಸುವ ಸಾಮರ್ಥ್ಯ ಅದಕ್ಕಿದೆ." ಎಂಬ ಗಾಂಧೀಜಿಯವರ ಮಾತಿನ ಆಶಯಕ್ಕೆ ತಕ್ಕಂತೆ ಅವಶ್ಯಕತೆಗಾಗಿ ಗಳಿಸಿ, ಹೊಂದಿಬಾಳಿದರೆ ನೆಮ್ಮದಿಯ ಸಂತೃಪ್ತ ಜೀವನ ಸಾಗಿಸಬಹುದು. ನಿಸರ್ಗ-ಪರಿಸರವನ್ನು ಶೋಷಿಸದೆ, ಪ್ರಕೃತಿಯ ಅಂಗವೇ ಆಗಿ ಅದರ ಸ್ಪಂದಕ್ಕೆ ಅನುಗುಣವಾಗಿ, ವಾಸ್ತವತೆ ಅರಿತು ಸಂಪೂರ್ಣತೆಯಲ್ಲಿ ಬದುಕಿದರೆ ಜೀವಜಾಲ ಉಳಿಯುತ್ತದೆ.

– ಕೆ.ಆರ್.ಬಸವರಾಜು
94814924817

## ಅನುವಾದ / ವಿಮರ್ಶೆ

### "ನನ್ನೊಲುಮೆ ಕೆಂಗುಲಾಬಿ"

ನನ್ನೊಲುಮೆಯಿಹುದು ಅದು ನವ ವಸಂತದಿ
ಅರಳಿರುವ ಹೊಸ ಕೆಂಗುಲಾಬಿಯಂತೆ;
ನನ್ನೊಲುಮೆಯಿಹುದು ಅದು ಮಧುರ
ಗಾನದೊಳು ಹರಿವ
ಸುಮಧುರ ಶೃತಿಯಂತೆ.

ಚಂದದಂದದ ಚೆಲುವೆ ನೀ ಲಾವಣ್ಯವತಿ,
ಅದಕಿಂತಲೂ ಮಿಗಿಲು ನನ್ನ ಪ್ರೀತಿ.
ಕೇಳಿಲ್ಲಿ ಎನ್ನೊಲವೆ,
ನಾ ನಿನ್ನ ಪ್ರೀತಿಸುವೆ,
ಸಾಗರದ ನೀರೆಲ್ಲ ಇಂಗಿ ಹೋಗುವ ತನಕ.

ಸಾಗರದ ನೀರೆಲ್ಲ ಇಂಗಿ ಹೋಗುವ ತನಕ,
ರವಿಯೊಡನೆ ಕಗ್ಗಲ್ಲು ಕರಗುವ ತನಕ,
ಹೇಳುವೆನು ಕೇಳೊಲವೆ,
ನಾ ನಿನ್ನ ಪ್ರೀತಿಸುವೆ,
ಜೀವದನುಕಣಕಣವು ಬತ್ತಿ ಹೋಗುವ ತನಕ.

ನನ್ನೊಲುಮೆಯ ಸೊಬಗೆ,
ನಿನಗೆನ್ನ ವಿದಾಯವಿದು,
ಆದರೀ ಅಗಲಿಕೆಯು ಕ್ಷಣಿಕವಿಹುದು,
ಹತ್ತು ಸಾವಿರ ಮೈಲುಗಳ
ದೂರದಲೆ ಇರು ನೀನು,
ಎನ್ನೊಲವೆ ಬರುತಿರುವೆ ಮತ್ತೆ ನಾನು.

– ರಾಬರ್ಟ್ ಬರ್ನ್ಸ್ ಅವರ
"ಎ ರೆಡ್ ರೆಡ್ ರೋಸ್" ಕವನದ ಅನುವಾದ

– ಸಿದ್ಧರಾಮಯ್ಯ ಡಿ.ಎಂ
kalpasahyadri@gmail.com

| ಅನುವಾದ / ವಿಮರ್ಶೆ | ಕತೆಗಾರನೆಂಬ ವಿಸ್ಮಯ : ಲೆಸ್ಕೋವ್ ಜಾದುವಿಗೆ ಮರುಳಾದ ವಾಲ್ಟರ್ ಬೆಂಜಮಿನ್ |
|---|---|

(ಪ್ರತಿಸ್ಪಂದದ ಜನವರಿ ಸಂಚಿಕೆಯಲ್ಲಿ "ಕತೆಗಾರನೆಂಬ ವಿಸ್ಮಯ: ಲೆಸ್ಕೋವ್‌ನ ಜಾದುವಿಗೆ ಮರುಳಾದ ವಾಲ್ಟರ್ ಬೆಂಜಮಿನ್" ಲೇಖನದ ಮುಂದುವರೆದ ಭಾಗ. ವಾಲ್ಟರ್ ಬೆಂಜಮಿನ್ ನ 'ಸ್ಟೋರಿಟೆಲ್ಲರ್' ಲೇಖನದ ಅನುವಾದ)

**೪. ಸಲಹೆ/ಸಮಾಲೋಚನೆಗಳ ಮಹತ್ವ:**

ತಮ್ಮ ಕತೆಗಳ ನೆಲೆಯನ್ನು ಜೀವನಕ್ಕೆ ಉಪಯೋಗವಾಗುವ ಆಸಕ್ತಿಗಳಲ್ಲಿ ಗುರುತಿಸಿ-ಕೊಳ್ಳುವುದು ಶ್ರೇಷ್ಠ ಕತೆಗಾರರ ಲಕ್ಷಣ. ಈ ಲಕ್ಷಣಗಳನ್ನು Leskov ಗಿಂತ Gotthelf ನಲ್ಲಿ ಚೆನ್ನಾಗಿ ಗುರುತಿಸಬಹುದು. ಈತ ತನ್ನ ಕತೆಗಳಲ್ಲಿ ರೈತರಿಗೆ ಕೃಷಿ ಕುರಿತು ತಿಳುವಳಿಕೆ ನೀಡುತ್ತಾನೆ. Nodier[1] ಸಹ Gaslightಗಳ ಬಳಕೆಯಲ್ಲಿ ಆಗುವಂತಹ ಸಾಮಾನ್ಯ ತೊಂದರೆಗಳನ್ನು ಕುರಿತು ಬರೆಯುತ್ತಾನೆ. ಹಾಗೆಯೇ Hebel ಸಹ. ಇವರೆಲ್ಲಾ ಒಂದು ನಿಜವಾದ ಕತೆಯ ಲಕ್ಷಣವನ್ನು ತಿಳಿಸುತ್ತಾರೆ. ಸಹಜವಾದ ಕತೆಯಲ್ಲಿ ತೆರೆದಿಟ್ಟಂತೆಯೇ ಆಗಲಿ, ಗುಪ್ತವಾಗಿಯೇ ಆಗಲೀ ಯಾವುದಾದರೂ ಉಪಯೋಗಕ್ಕೆ ಬರುವಂತಹದ್ದು ಇರುತ್ತದೆ. ಕೆಲವೊಮ್ಮೆ ನೈತಿಕವಾದ, ಮತ್ತೊಮ್ಮೆ ಪ್ರಾಯೋಗಿಕವಾದ ಸಲಹೆ ಹಾಗೂ ಇನ್ನೊಮ್ಮೆ ಒಂದು ಗಾದೆ ಅಥವಾ ನುಡಿಗಟ್ಟಿನ ರೂಪದಲ್ಲಿ ಕತೆಗಾರ ತನ್ನ ಕೇಳುಗರಿಗೆ ಸಮಾಲೋಚನೆ ನೀಡುತ್ತಾನೆ. ಆದರೆ ಇಂದು 'ಸಲಹೆ ಅಥವಾ ಸಮಾಲೋಚನೆ ಪಡೆಯುವುದು' (Counsel) ಹಳೇ ಕಾಲದ ಪದ್ಧತಿ ಎಂದು ಅನಿಸುತ್ತಿರುವುದು ಸತ್ಯ. ಈ ಧೋರಣೆ ಅನುಭವವನ್ನು ಸಾಗಿಸಬಲ್ಲ ಸಾಮರ್ಥ್ಯ ಕಡಿಮೆಯಾಗುತ್ತಿದೆ ಎಂಬುದರ ಸೂಚಕ ಅಷ್ಟೇ. ಹಾಗಾಗಿ ನಮಗಾಗಿಯೇ ಆಗಲೀ ಇನ್ನೊಬ್ಬರಿಗಾಗಿಯೇ ಆಗಲಿ ಸಲಹೆ/ ಸಮಾಲೋಚನೆಗಳು ಇಲ್ಲದಂತಾಗಿದೆ. ಮೇಲಾಗಿ ಇಲ್ಲಿ ಕಂಡು ಬರುವ ಸಲಹೆಗಳು ನಿಧಾನವಾಗಿ ತೆರೆದುಕೊಳ್ಳುತ್ತಿರುವ ಕತೆಯನ್ನು ಮುಂದುವರೆಸುವ ಸಲುವಾಗಿ ಇರುವ ಪ್ರಸ್ತಾವನೆಗಳಷ್ಟೇ ಹೊರತು ಯಾವುದೇ ಪ್ರಶ್ನೆಗಳಿಗೆ ಉತ್ತರಗಳಲ್ಲ. ಈ ಸಲಹೆಯ ಅಂಶವನ್ನು ಗಮನಿಸಲು ಕತೆ ಹೇಳುವ ಸಾಮರ್ಥ್ಯ ಮೊದಲು ಇರಬೇಕು. ಅಷ್ಟಕ್ಕೂ ಮನುಷ್ಯ ಸಲಹೆ/ ಸಮಾಲೋಚನೆಯನ್ನು ಸ್ವಾಗತಿಸುವುದು ಎಷ್ಟು ಎಂಬುದು ಆತ/ಆಕೆ ತನ್ನ ಸನ್ನಿವೇಶಕ್ಕೆ ಎಷ್ಟರಮಟ್ಟಿಗೆ ಮಾತನಾಡಲು ಅವಕಾಶ ನೀಡುತ್ತಾರೆ ಎಂಬುದನ್ನು ಅವಲಂಬಿಸಿರುತ್ತದೆ.


ವಾಲ್ಟರ್ ಬೆಂಜಮಿನ್

ನೈಜ ಜೀವನವೆಂಬ ಹೊದಿಕೆಗೆ ಸಮಾಲೋಚನೆಯನ್ನು ನೇಯ್ದರೆ ಅದೇ ಅರಿವು. ಕತೆ ಹೇಳುವ ಕಲೆಯು ಕ್ಷೀಣಿಸುತ್ತಿರುವುದಕ್ಕೆ ಕಾರಣ, ಸತ್ಯದ ಮಹೋನ್ನತ ಅಂಶವಾದ ಅರಿವು ಸಾಯುತ್ತಿರುವುದೇ ಆಗಿದೆ. ಇದು ಈವಾಗ ಶುರುವಾದ ಪ್ರಕ್ರಿಯೆಯೇನಲ್ಲ. ಇದನ್ನು ಕೇವಲ ಅವನತಿಯ ಲಕ್ಷಣವನ್ನಾಗಿಯಾಗಲೀ ಅಥವಾ ಆಧುನಿಕತೆಯ ಚಿಹ್ನೆಯನ್ನಾಗಿಯಷ್ಟೇ ಕಾಣುವುದಾಗಲೀ ಅವಿವೇಕವಾದೀತು. ಇತಿಹಾಸದ ಹರಿವಿನಲ್ಲಿ ಜಾತ್ಯಾತೀತ ಶಕ್ತಿಗಳ ಉಗಮದ ಜೊತೆ-ಜೊತೆಗೇ ಸಾಗಿ ಬಂದ ಈ ನಾಶದ ಅಂಶವು ನಿಧಾನವಾಗಿ ಜೀವಂತ ಭಾಷಾ ವಲಯದಿಂದ ಕಥನವನ್ನು ತೆಗೆದಿರಿಸುವುದಲ್ಲದೆ ಯಾವುದು ನಾಶವಾಗುತ್ತಿದೆಯೋ ಅದರಲ್ಲೇ ನವೀನ ಸೌಂದರ್ಯವನ್ನು ಕಾಣುವುದಕ್ಕೆ ಪ್ರಯತ್ನಿಸುತ್ತದೆ.

---

1 ಫ್ರೆಂಚ್ ರೊಮ್ಯಾಂಟಿಕ್ ಚಳುವಳಿಯನ್ನು ಪ್ರೇರೇಪಿಸಿದ ಫ್ರೆಂಚ್ ಸಾಹಿತಿ Jean Charles Emmanual Nodier (1780–1844)

## ೫. ಕಾದಂಬರಿಯೆಂಬ ವಿಲನ್ :

ಆಧುನಿಕ ಕಾಲದ ಲಕ್ಷಣವಾದ ಕಾದಂಬರಿಯ ಉಗಮವು ಕತೆ ಹೇಳುವ ಕಲೆಯ ನಾಶಕ್ಕೆ ನಾಂದಿ ಹಾಡಿತು. ಕಾದಂಬರಿಗೂ ಕತೆಗೂ ಇರುವ ವ್ಯತ್ಯಾಸವು ಪ್ರಮುಖವಾಗಿ ಪುಸ್ತಕವನ್ನು ಅವಲಂಬಿಸಿರುವುದರಲ್ಲಿ ಇದೆ. ಮುದ್ರಣದ ಆವಿಷ್ಕಾರದಿಂದಲೇ ಕಾದಂಬರಿಯ ಹರಡುವಿಕೆಯು ಸಾಧ್ಯವಾಯಿತು. ಮೌಖಿಕವಾಗಿ ನಿಭಾಯಿಸಬಲ್ಲ ಕಥಾ ಮಹಾಕಾವ್ಯದ ಸಂಪತ್ತು ವ್ಯಾಪಾರದ ಬಂಡವಾಳವಾದ ಕಾದಂಬರಿಗಿಂತ ಬಹಳ ಭಿನ್ನ. ಉಳಿದ ಗದ್ಯ ಸಾಹಿತ್ಯ ಪ್ರಾಕಾರಗಳಾದ ಯಕ್ಷಿಣಿ ಕತೆ, ಐತಿಹ್ಯ, ನಾವೆಲ್ಲಾಗಳಿಗಿಂತ, (Novella) ಕಾದಂಬರಿ ಯಾಕೆ ಭಿನ್ನವೆಂದರೆ ಅದರ ಮೂಲ ಮೌಖಿಕ ಪರಂಪರೆ ಅಲ್ಲ ಮತ್ತು ಮೌಖಿಕ ಪರಂಪರೆಗೆ ಅದು ಏನನ್ನೂ ನೀಡುವುದಿಲ್ಲ. ಹಾಗಾಗಿಯೇ ಕಾದಂಬರಿಯು ಕತೆ ಹೇಳುವುದಕ್ಕಿಂತ ಭಿನ್ನ. ಕತೆಗಾರ ಅನುಭವದಿಂದ ಪಡೆಯುತ್ತಾನೆ ; ತನ್ನ ಸ್ವಂತದ್ದಾಗಬಹುದು ಅಥವಾ ಬೇರೆಯವರಿಂದ ಪಡೆದದ್ದಾಗಬಹುದು. ಹಾಗೆ ಪಡೆದ ಅನುಭವವನ್ನು ಕೇಳುಗರ ಅನುಭವವನ್ನಾಗಿಸುತ್ತಾನೆ. ಆದರೆ ಕಾದಂಬರಿಕಾರ ಪ್ರತ್ಯೇಕವಾಗಿಯೇ ಉಳಿಯುತ್ತಾನೆ. ಕಾದಂಬರಿಯ ಹುಟ್ಟು ಇರುವುದು ಏಕಾಕಿ ವ್ಯಕ್ತಿಯಲ್ಲಿ. ತನ್ನ ಮುಖ್ಯವಾದ ಕಾಳಜಿಗಳನ್ನು ಉದಾಹರಿಸಿಕೊಳ್ಳುತ್ತಾ ತನ್ನನ್ನು ತಾನು ಅಭಿವ್ಯಕ್ತಿಸಿಕೊಳ್ಳಲಾರದೆ, ಸಲಹೆಗಳಿಗೆ ಒಳಪಡದೆ, ಇತರರಿಗೂ ಸಲಹೆ ನೀಡಲಾರದವನು ಕಾದಂಬರಿಯೊಂದನ್ನು ಬರೆಯುತ್ತಾನೆ. ಒಂದೇ ಮಾಪನದಲ್ಲಿ ಅಳೆಯಲಾಗದ ಮಾನವ ಜೀವನವನ್ನು ತಾನೊಬ್ಬನೇ ಅದರ ಧ್ವನಿಯಾಗಿ ಅತಿರೇಕಕ್ಕೆ ಒಯ್ಯುತ್ತಾನೆ. ಬದುಕಿನ ಅಖಂಡತೆಯ ನಡುವೆಯೇ ಅದರ ಅಖಂಡತೆಯನ್ನು ಪ್ರತಿನಿಧಿಸುವವರ ಗಾಢವಾದ ಜಟಿಲತೆಗೆ ಕಾದಂಬರಿಯು ಸಾಕ್ಷ್ಯವಾಗುತ್ತದೆ. ಈ ಪ್ರಾಕಾರದ ಮೊದಲ ಪ್ರಮುಖ ಕೃತಿ 'Don Quixote'[2]. ಇಲ್ಲಿ ಕಥಾನಾಯಕ Don Quixoteನ ಆಧ್ಯಾತ್ಮಿಕ ಮಹತ್ವವಾಗಲೀ, ಧೈರ್ಯವಾಗಲೀ, ನೆರವು ನೀಡುವ ಗುಣವಾಗಲೀ ಹೇಗೆ ಸಮಾಲೋಚನೆ ಇಲ್ಲದೆ ಶೂನ್ಯವಾಗಿದೆ ಹಾಗೂ ಅರಿವಿನ ಲವಲೇಶವೂ ಇಲ್ಲದೆ ನಿರ್ವಾಣವಾಗಿದೆ ಎಂಬುದನ್ನು ಗಮನಿಸಬೇಕು. ಶತಶತಮಾನಗಳ ಕಾಲಾವಧಿಯಲ್ಲಿ ಆಗೊಮ್ಮೆ ಈಗೊಮ್ಮೆ ಕಾದಂಬರಿಯಲ್ಲಿ ತಿಳುವಳಿಕೆಯನ್ನು ಅಳವಡಿಸುವ ಪ್ರಯತ್ನಗಳು[3] ಕಂಡುಬಂದಿದ್ದರೂ ಸಹ ಅದು ಕಾದಂಬರಿಯನ್ನು ಮಾರ್ಪಾಡಿಸುವುದರಲ್ಲೇ ತೃಪ್ತವಾಗಬೇಕಾಯಿತು. ಈ ಪ್ರಯತ್ನದಲ್ಲಿ Bildungsroman[4] ಎಂಬ ಹೊಸ ಕಾದಂಬರಿಯ ಪ್ರಾಕಾರ ಬೆಳೆಯಿತೇ ಹೊರತು ಕಾದಂಬರಿಯ ಮೂಲ ರಚನೆಯಲ್ಲೇನು ವ್ಯತ್ಯಾಸವಾಗಲಿಲ್ಲ. ಸಾಮಾಜಿಕ ಪ್ರಕ್ರಿಯೆಯನ್ನು ವ್ಯಕ್ತಿಯ ವಿಕಸನದೊಂದಿಗೆ ಹೊಂದಿಸುತ್ತಲೇ, ವ್ಯಕ್ತಿಯ ಬೆಳವಣಿಗೆಯನ್ನು ನಿರ್ಧರಿಸುವ ವ್ಯವಸ್ಥೆಗೆ ದುರ್ಬಲವಾದ ಸಮರ್ಥನೆಯನ್ನು ಒದಗಿಸುವುದಕ್ಕಷ್ಟೇ Bildungsroman ಸೀಮಿತವಾಯಿತು. ಇದು ನೀಡುವ ಕ್ರಮಬದ್ಧತೆಯು ಬದುಕಿನ ವಾಸ್ತವದಿಂದ ದೂರವಿರುತ್ತದೆ.

## ೬. ಮಾಹಿತಿಯ ಅಬ್ಬರ:

ಸಾವಿರಾರು ವರ್ಷಗಳಿಂದಲೂ ಭೂಮಿಯ ಮೇಲ್ಮೈಯಲ್ಲಿ ಆದ ಬದಲಾವಣೆಗಳಂತೆಯೇ ಮಹಾಕಾವ್ಯದ ಪ್ರಾಕಾರದಲ್ಲಿ ಬದಲಾವಣೆಗಳು ಆಗಿವೆ. ಯಾವುದೇ ಪ್ರಕಾರದ ಮಾನವ

---

2 by Miguel de Cervantes Saavendra(1547 1615) ಎರಡು ಭಾಗಗಳಲ್ಲಿ ಪ್ರಕಟವಾದವು, 1604 ಮತ್ತು 1614

3 ಮುಖ್ಯವಾಗಿ Goetheಯ ಕೊನೆಯ ಕಾದಂಬರಿ Wilhelm misters wanderjahre ಯಲ್ಲಿ. ಈ ಕಾದಂಬರಿಯಲ್ಲಿ ಕಥೆಗಾರನು ಅಲೆಯುತ್ತಾ ಅನೇಕ ಕತೆಗಳನ್ನು ಮತ್ತು ಕತೆಗಾರರನ್ನು ಸಂಧಿಸುವ ವಿವರಣೆಗಳು ಇವೆ.

4 ಜರ್ಮನ್ ನಲ್ಲಿ 'education novel' ಎಂಬ ಅರ್ಥವಿದೆ. ಇಂತಹ ಕಾದಂಬರಿಗಳಲ್ಲಿ ಮುಖ್ಯ ಪಾತ್ರವು ಮುಗ್ಧತೆಯಿಂದ ಪ್ರೌಢತೆಯ ಕಡೆಗೆ ಪ್ರಯಾಣಿಸುತ್ತದೆ.

ಸಂವಹನ ಇಷ್ಟೊಂದು ನಿಧಾನಗತಿಯಲ್ಲಿ ಆಕಾರ ಪಡೆದದ್ದಾಗಲಿ, ನಿಧಾನವಾಗಿ ಅವನತಿಯನ್ನು ಕಂಡದ್ದಾಗಲೀ ಇಲ್ಲ. ಕಾದಂಬರಿಯು ಪರಿಪೂರ್ಣವಾಗಿ ಅರಳಲು ಬೇಕಾದ ಅಂಶಗಳನ್ನು ಪಡೆಯಲು ನೂರಾರು ವರ್ಷಗಳ ಕಾಲ (ಮಧ್ಯಮ ವರ್ಗದ ಉಗಮದವರೆಗೆ) ಕಾಯಬೇಕಾಯಿತು. ಇದರ ಬರುವಿಕೆಯಿಂದ ಕತೆ ಹೇಳುವುದು ಪ್ರಾಚೀನತೆಗೆ ಸರಿಯಿತು ನಿಜ, ಆದರೆ ಕಾದಂಬರಿಯು ಬಂಡವಾಳ ವ್ಯವಸ್ಥೆಯ ಏರ್ಪಾಡನ್ನು ಆದರಿಸಲು ಪ್ರಯತ್ನಿಸಿತು ಅಷ್ಟೇ ; ಈ ಹೊಸ ವ್ಯವಸ್ಥೆಯನ್ನು ನಿರ್ಧರಿಸಲು ಅದರಿಂದ ಸಾಧ್ಯವಾಗಲಿಲ್ಲ. ಪರಿಪೂರ್ಣವಾಗಿ ಬೆಳೆದ ಬಂಡವಾಳ ಶಾಹಿಯು ತನ್ನ ಪ್ರಮುಖ ಅಸ್ತ್ರವಾದ ಮಾಧ್ಯಮದ ಬಲದಿಂದ ಮಧ್ಯಮ ವರ್ಗವನ್ನು ಸಂಪೂರ್ಣ ಹತೋಟಿಯಲ್ಲಿ ಇಟ್ಟುಕೊಂಡಿತ್ತು. ಆಗ ಉದಯಿಸಿದ ಸಂವಹನವು ಮಹಾಕಾವ್ಯವನ್ನು ಹಿಂದೆಂದಿಗಿಂತಲೂ ಭಿನ್ನವಾಗಿ ಪ್ರಭಾವಿಸುತ್ತಿದೆ. ಕತೆ ಹೇಳುವ ಕಲೆಯಂತೆಯೇ ಕಾದಂಬರಿಯೂ ಸಹ ಅಪರಿಚಿತನಂತಾಗಿ ಮುಗ್ಗಟ್ಟನ್ನು ಎದುರಿಸುತ್ತಿದೆ. ಈ ಹೊಸ ತರಹದ ಸಂವಹನವೇ 'ಮಾಹಿತಿ'.

LeFigaro ದ ಸಂಸ್ಥಾಪಕ Villemessant[5] ಮಾಹಿತಿಯ ಲಕ್ಷಣವನ್ನು ಈ ರೀತಿಯಾಗಿ ವಿವರಿಸುತ್ತಾನೆ: "ನನ್ನ ಓದುಗರಿಗೆ Latin ಕೇರಿಯೊಂದರ ಅಟ್ಟದ ಮೇಲೆ ಹೊತ್ತಿದ ಬೆಂಕಿ Madrid ನಲ್ಲಿನ ಕ್ರಾಂತಿಗಿಂತ ಮುಖ್ಯವಾದದ್ದು." ದೂರದೂರಿನಿಂದ ಬಂದ ಪ್ರಜ್ಞೆಗಿಂತ ಹತ್ತಿರವಿರುವ ವಿಚಾರದ ಬಗ್ಗೆ ನೀಡುವ ಮಾಹಿತಿ ಹೆಚ್ಚು ಓದುಗರ ಗಮನ ಸೆಳೆಯುತ್ತದೆ. ಕತೆಗಾರನಿಗೆ ತಾನು ಬಳಸಿಕೊಳ್ಳುವ ದೂರ ದೇಶದ ತಿಳುವಳಿಕೆಯನ್ನಾಗಲೀ, ಸ್ಥಳೀಯ ಪರಂಪರೆಯಿಂದ ಬಂದ ಜ್ಞಾನವನ್ನಾಗಲೀ ನಿಜವೆಂದು, ಸತ್ಯವೆಂದು ದೃಢಪಡಿಸಬೇಕಾದ ಅವಶ್ಯಕತೆ ಕಾಣುವುದಿಲ್ಲ. ಆದರೆ ಮಾಹಿತಿಯು ಸಿದ್ಧವಾದ ರುಜುವಾತನ್ನು ಬಯಸುತ್ತದೆ. 'ತನ್ನಿಂದ ತಾನಾಗಿಯೇ ಅರ್ಥವಾಗಬಲ್ಲದು' ಎಂಬಂತೆ ಕಾಣಿಸಿಕೊಳ್ಳುವುದಷ್ಟೇ ಅದರ ಅಧಿಕಾರ ಶಕ್ತಿಯನ್ನು (authority) ಹೆಚ್ಚಿಸುತ್ತದೆ. ತಮಾಷೆಯೇನೆಂದರೆ ಹಿಂದಿನ ಶತಮಾನಗಳಿಂದ ಬಂದ ಜ್ಞಾನಕ್ಕಿಂತ ಕೆಲವೊಮ್ಮೆ ಮಾಹಿತಿಯೇನೂ ನಿಕರವಾಗಿರಲಿಕ್ಕಿಲ್ಲ. ಪ್ರಾಚೀನ ಜ್ಞಾನವು ಸಹ ಅಲೌಕಿಕವಾದುದರಿಂದ ಎರವಲು ಪಡೆದಿರುತ್ತದೆ. ಮಾಹಿತಿಗೆ ನ್ಯಾಯಸಮ್ಮತ ಎಂದು ತೋರಿಸಿಕೊಳ್ಳುವ ಅನಿವಾರ್ಯತೆ ಇದೆ. ಆದ್ದರಿಂದಲೇ ಮಾಹಿತಿಯು ಕತೆಹೇಳುವ ಚೇತನಕ್ಕೆ ಹೋಲಿಸಿದರೆ ಅಸಂಬದ್ಧವಾಗಿ ಕಾಣುತ್ತದೆ, ಮತ್ತು ಕತೆ ಹೇಳುವ ಕಲೆಯ ಅವನತಿಗೆ ನಿರ್ಣಾಯಕ ಪಾತ್ರವನ್ನು ವಹಿಸಿದೆ.

ದಿನಾ ಬೆಳಗ್ಗೆ ಪ್ರಪಂಚದಾದ್ಯಂತದಿಂದ ಸುದ್ದಿಯನ್ನು ಪಡೆಯುತ್ತೇವೆಯಾದರೂ ಗಮನದಲ್ಲಿಡಬಹುದಾದ ಕತೆಗಳ ಕೊರತೆ ಎದ್ದು ಕಾಣುತ್ತದೆ. ಇದು ಯಾಕೆಂದರೆ ನಮಗೆ ಲಭ್ಯವಾಗುವ ಮಾಹಿತಿಯು ವಿವರಣೆಯನ್ನು ಹೊತ್ತೇ ಬರುತ್ತದೆ. ಬೇರೇ ಮಾತುಗಳಲ್ಲಿ ಹೇಳುವುದಾದರೆ ಯಾವುದೇ ಘಟನೆಯ ವಿವರಗಳು ಕತೆ ಹೇಳುವುದಕ್ಕೆ ಪ್ರಯೋಜನಕ್ಕೆ ಬರುತ್ತಿಲ್ಲ, ಬದಲಾಗಿ ಮಾಹಿತಿಗೆ ಅನುಕೂಲಕರವಾಗಿವೆ. ಕತೆ ಹೇಳುವಾಗ ಸ್ಪಷ್ಟೀಕರಣಗಳನ್ನು, ವಿವರಣೆಗಳನ್ನು ಹೊರಗಿಟ್ಟರೆ ಕತೆ ಹೇಳುವ ಕಲೆಯು ಸಮರ್ಪಕ ಹಾಗು ಅರ್ಥಪೂರ್ಣವಾಗುತ್ತದೆ. Leskov ಗೆ ಈ ಕಲೆ ಸಿದ್ಧಿಸಿತ್ತು.[6] ಅವನು ಅಸಾಮಾನ್ಯ ವಸ್ತುಗಳನ್ನು ಮತ್ತು ನಂಬಲೇ ಸಾಧ್ಯವಿಲ್ಲದ ವಿಷಯಗಳನ್ನು ಅಸಾಧಾರಣ ಸ್ಪಷ್ಟತೆಯೊಂದಿಗೆ ವಿವರಿಸಿದರೂ ಸಹ ಘಟನೆಗಳ ಮನೋವ್ಯಾಪಾರವನ್ನು ಕುರಿತಾದ ಸಂಬಂಧವನ್ನೂ ಓದುಗರ ಮೇಲೆ ಹೇರುವುದಿಲ್ಲ.

---

5. Jean Hippolyte Auguste Cartier de Villemessant (1812-79)

6. ಅವನ ಕತೆ 'The Deception' ಮತ್ತು 'The White Eagle' ಉದಾಹರಿಸಬಹುದು.

ತಾನು ಅರ್ಥ ಮಾಡಿಕೊಂಡ ರೀತಿಯಲ್ಲೇ ಓದುಗ ಅರ್ಥವನ್ನು ವ್ಯಾಖ್ಯಾನಿಸಿಕೊಳ್ಳಲು ಸ್ವತಂತ್ರ್ಯನು. ಹಾಗಾಗಿಯೇ ಅವನ ಕಥನವು ವಿಸ್ತಾರವನ್ನೂ, ಸಮೃದ್ಧಿಯನ್ನೂ ಪಡೆಯುತ್ತದೆ. ಮಾಹಿತಿಯೂ ಇಲ್ಲಿ ಸೋಲುತ್ತದೆ.

**೭. ಹೆರಡೋಟಸ್ ಎಂಬ ಕತೆಗಾರ:**

ಲೆಸ್ಕೋವ್ classic ಗಳಿಂದ ಪ್ರಭಾವಿತನಾದವನು. ಗ್ರೀಕರ ಮೊದಲ ಕತೆಗಾರ Herodotus (c-480-c-425 BC) ಪ್ರಥಮ ಇತಿಹಾಸಕಾರ ಕೂಡ. ತನ್ನ 'Histories' ಕೃತಿಯಲ್ಲಿ ಯುದ್ಧದ ಕಾರ್ಯಕಾರಣದ ಉದ್ದೇಶ ಹಾಗೂ ನಮೂನೆಗಳನ್ನು ತಿಳಿಸುವಾಗ ಕಾವ್ಯಾತ್ಮಕ ವಿವರಣೆಗಳನ್ನು ತ್ಯಜಿಸುತ್ತಾನೆ. Histories[7] ಕೃತಿಯ ಮೂರನೇ ಪುಸ್ತಕದ ನಾಲ್ಕನೇ ಪಾಠದಲ್ಲಿ ಒಂದು ಕತೆಯಿದೆ. ಅದು Psammenituss ನನ್ನು ಕುರಿತದ್ದು. ಪರ್ಶಿಯನ್ ರಾಜ Cambyses, ಈಜಿಪ್ಟಿನ ರಾಜ Psammenitusನನ್ನು ಸೆರೆಯಾಗಿಸಿದ್ದಾನೆ. Cambysesಗೆ ತನ್ನ ಬಂಧಿಯನ್ನು ಅವಮಾನಿಸಬೇಕೆಂದು ಆಸೆ. ಪರ್ಶಿಯನ್‌ರ ಗೆಲುವನ್ನು ಆಚರಿಸಲು ಸಾಗುವ ಮೆರವಣಿಗೆಯ ಹಾದಿಯಲ್ಲಿ Psammenituss ನನ್ನು ನಿಲ್ಲಿಸಲು ಆಜ್ಞೆ ಮಾಡಿದ್ದಾನೆ. ಸೆರೆಯಾದ ರಾಜನಿಗೆ ಅವನ ಮಗಳು ಬಿಂದಿಗೆ ಹೊತ್ತು ಪರಿಚಾರಿಕೆಯಾಗಿ ಬರುವುದನ್ನು ನೋಡುವಂತೆ ವ್ಯವಸ್ಥೆ ಮಾಡಲಾಗಿದೆ. ಎಲ್ಲಾ ಈಜಿಪ್ಟಿಯನ್ನರು ಈ ದೃಶ್ಯವನ್ನು ನೋಡಲಾಗದೆ ಗೋಳಾಡುತ್ತಾ ರೋಧಿಸುತ್ತಿದ್ದಾರೆ.ಆದರೆ Psammenituss ಒಂಟಿಯಾಗಿ ನಿಂತಿದ್ದಾನೆ. ನಿಶ್ಯಬ್ಧವಾಗಿ, ಚಲನೆಯಿಲ್ಲದೆ, ಕಣ್ಣು ನೆಲದಲ್ಲಿ ಕೀಲಿಸಿವೆ. ನಂತರ ಅವನ ಮಗನನ್ನು ಗಲ್ಲಿಗೇರಿಸಲು ಕರೆದೊಯ್ಯಲಾಗುತ್ತಿದೆ. ಆಗಲೂ ಅಷ್ಟೆ, Psammenitussssನಿಂದ ಯಾವುದೇ ಪ್ರತಿಕ್ರಿಯೆ ಇಲ್ಲ. ಆದರೆ ಸೆರೆಯಾದವರ ಗುಂಪಿನಲ್ಲಿ ಇದ್ದ ವಯಸ್ಸಾದ, ಶಕ್ತಿ ಇಂಗಿದ ಸೇವಕನನ್ನು ಗುರುತಿಸುತ್ತಿದ್ದಂತೆಯೇ ತನ್ನ ಮುಷ್ಟಿಯಿಂದ ತಲೆಯನ್ನು ಗುದ್ದಿಕೊಳ್ಳುತ್ತಾ ತೀವ್ರ ಶೋಕದ ಲಕ್ಷಣಗಳನ್ನು ತೋರಿಸುತ್ತಾನೆ.

ಕಥೆ ಹೇಳುವ ಕೌಶಲ್ಯವೆಂದರೆ ಎಂತಹದು ಎಂಬುದನ್ನು ಈ ಕತೆಯಿಂದ ತಿಳಿಯಬಹುದು. ಆಗ ತಾನೇ ಕೇಳಿದಾಗ ಇರುವಷ್ಟೇ ಹೊಸತನ್ನು ಮಾಹಿತಿಯು ನಂತರವೂ ಕಾಪಾಡಿಕೊಳ್ಳಲಾರದು. ಆ ಕ್ಷಣಕ್ಕಷ್ಟೆ ಅದು ಹೊಸತು. ಆ ಕ್ಷಣಕ್ಕೆ ತನ್ನನ್ನು ತಾನು ಸಮರ್ಪಿಸಿ ಮಾಹಿತಿಯು ಪ್ರತಿಯೊಂದು ನಿಮಿಷದಲ್ಲಿಯೂ ಘಟಿಸಿದ ವಿವರವನ್ನು ಕಾಲವ್ಯಯ ಮಾಡದಂತೆ ವಿವರಿಸಬೇಕಾಗುತ್ತದೆ. ಕತೆ ಹಾಗಲ್ಲ, ತನ್ನನ್ನು ತಾನು ವ್ಯಯ ಮಾಡಿಕ್ಕೊಳ್ಳುವುದಿಲ್ಲ. ತನ್ನ ಶಕ್ತಿಯನ್ನು ಉಳಿಸಿಕೊಂಡು ಕೇಂದ್ರೀಕರಿಸಿಕೊಳ್ಳುವುದಷ್ಟೇ ಅಲ್ಲದೇ ತುಂಬಾ ಕಾಲಾನಂತರವೂ ಸಹ ಅದನ್ನು ಬಿಡುಗಡೆಗೊಳಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಈ ಈಜಿಪ್ಟ್‌ನ ರಾಜ ಯಾಕೆ ಸೇವಕನನ್ನು ನೋಡಿದ ಕೂಡಲೇ ಶೋಕಿಸುತ್ತಾನೆ ಎಂದು Montaigne ಹೀಗೆ ವಿವರಿಸುತ್ತಾನೆ: 'ರಾಜ ಆಗಲೇ ಶೋಕದಿಂದ ತುಂಬಿದ್ದ. ಒಂದು ಸಣ್ಣ ಹೆಚ್ಚಳವು ಅವನ ದುಃಖದ ಕಟ್ಟೆಯನ್ನು ಒಡೆದಿತ್ತು'.

ಆದರೆ ಅದನ್ನು ಹೀಗೂ ಹೇಳಬಹುದು: ರಾಜನನ್ನು ರಾಜಕುಲದವರ ಹಣೇಬರಹ ವಿಚಲಿತನನ್ನಾಗಿಸಲಿಲ್ಲ. ಏಕೆಂದರೆ, ಅದು ಅವರ ವಿಧಿ.

ಅಥವಾ ಹೀಗೂ ನಿಜ ಜೀವನದಲ್ಲೇ ನಡೆಯುವ ಘಟನೆಗಿಂತ ಅಂಕದ ಮೇಲಿನ ಪಾತ್ರ ಮನಸ್ಸಿಗೆ ಹೆಚ್ಚು ತಟ್ಟುತ್ತದೆ. ರಾಜನಿಗೆ ಈ ಸೇವಕ ಕೇವಲ ಒಬ್ಬ ಪಾತ್ರದಾರಿ.

ಅಥವಾ ಉಗ್ರವಾದ ವ್ಯಥೆ ವಿಶ್ರಾಂತಿಯಲ್ಲಿದ್ದಾಗ ಕಟ್ಟೆಯೊಡೆಯುತ್ತದೆ. ಸೇವಕನನ್ನು ನೋಡಿದ್ದು ರಾಜನ ಭಾವವನ್ನು ಸಡಿಲಗೊಳಿಸಿತು ಇತ್ಯಾದಿ.

---

7. ಈ ಕೃತಿಯ ಮೂರನೇ ಪುಸ್ತಕದಲ್ಲಿ Cambyses Egyptನ್ನು ಆಕ್ರಮಣ ಮಾಡಿದ ಪ್ರಸಂಗವನ್ನು ಕುರಿತು ತಿಳಿಸುತ್ತಾನೆ.

8. Montaigne (1533-92).ಅವನ ಪ್ರಬಂಧ 'On Sadness'ಬಗ್ಗೆ ಮಾತನಾಡುವಾಗ Psammenitus ಕತೆಯನ್ನು ಉಲ್ಲೇಖಿಸುತ್ತಾನೆ.

ಆದರೆ ಹೆರಡೋಟಸ್ ಯಾವುದೇ ವಿವರಣೆಯನ್ನು ನೀಡುವುದಿಲ್ಲ ಅವನ ವರದಿಯು ಯಾವುದೇ ಭಾವಾವೇಶವಿಲ್ಲದೆ ಶುಷ್ಕವಾಗಿದೆ. ಆದುದರಿಂದಲೇ ಪ್ರಾಚೀನ ಈಜಿಪ್ಟ್‌ನ ಈ ಕತೆಯು ಸಾವಿರಾರು ವರ್ಷಗಳ ನಂತರವೂ ಕುತೂಹಲ ಉಳಿಸಿಕೊಂಡು ಕೇಳುಗನನ್ನು ಯೋಚನೆಗೆ ಹಚ್ಚುತ್ತದೆ. ಗಾಳಿಯಾಡದ ಪಿರಮಿಡ್‌ಗಳಲ್ಲಿ ಶತ ಶತಮಾನಗಳಿಂದಲೂ ಮುಚ್ಚಿಟ್ಟಿದ್ದ ಬೀಜವೊಂದು ತನ್ನ ಮೊಳಕೆಯೊಡೆಯುವ ಶಕ್ತಿಯನ್ನು ಉಳಿಸಿಕೊಂಡ ಹಾಗೆ.

೮. ಕತೆಗಾರನ ದುರ್ವಿಧಿ:

ಮನಃಶಾಸ್ತ್ರೀಯ ವ್ಯಾಖ್ಯಾನವನ್ನು ಪ್ರತಿಬಂಧಿಸುವ ಕನ್ಯಾವಸ್ಥೆಯಲ್ಲಿರುವ ಕತೆಯ ಸಾಂದ್ರತೆಯು ಸಮರ್ಪಕವಾಗಿ ಅದನ್ನು ನೆನಪಿನ ಕೋಶಕ್ಕೆ ಕರೆದೊಯ್ಯುತ್ತದೆ. ಮನೋವ್ಯಾಖ್ಯಾನದ ಛಾಯೆಯನ್ನು ಎಷ್ಟು ಸಹಜವಾಗಿ ಕತೆಗಾರ ತಿರುಚುತ್ತಾನೋ ಕೇಳುಗನ ನೆನಪಿನಲ್ಲಿ ಅದು ಅಷ್ಟೇ ಜಾಗ ಪಡೆಯುತ್ತಾ ಹೋಗುತ್ತದೆ.ಕೇಳುವವನ ಅನುಭವದಲ್ಲಿ ಅದು ಕೂಡಿಕೊಂಡಂತೆಲ್ಲಾ ಅದನ್ನು ಮತ್ತೆ ಮತ್ತೆ ಹೇಳಬೇಕೆಂಬ ಪ್ರವೃತ್ತಿ ದಟ್ಟವಾಗುತ್ತದೆ.ಕತೆಯನ್ನು ಆಳದಲ್ಲಿ ರಕ್ತಗತವಾಗಿಸಿಕೊಳ್ಳುವ ಈ ಪ್ರಕ್ರಿಯೆಯು ವಿಶ್ರಾಂತ ಸ್ಥಿತಿಯನ್ನು ನಿರೀಕ್ಷಿಸುತ್ತದೆ. ನಿದ್ರೆಯು ಭೌತಿಕ ವಿಶ್ರಾಂತಿಯ ಪರಮಾವಧಿಯಾದರೆ, ಮಾನಸಿಕ ವಿಶ್ರಾಂತಿಯ ತುತ್ತತುದಿ ಬೇಸರ. ಅನುಭವದ ಮೊಟ್ಟೆಗೆ ಕಾವು ಕೊಡುವ ಕನಸಿನ-ಹಕ್ಕಿ ಈ ಬೇಸರ. ಎಲೆಗಳ ಮರ್ಮರ ಸದ್ದು ಸಾಕು ಅದನ್ನು ಓಡಿಸುವುದಕ್ಕೆ. ಈ ಪಕ್ಷಿಯ ಗೂಡುಗಳು ಬೇಸರ ತರಿಸುವ ಅನೇಕ ಚಟುವಟಿಕೆಗಳಿಗೆ ಜಾಗಕೊಡುತ್ತದೆ. ನಗರ ಪ್ರದೇಶದಿಂದ ಇಂತಹ ಅನೇಕ ಚಟುವಟಿಕೆಗಳು ಕಣ್ಮರೆಯಾಗಿವೆ, ಬಹುತೇಕ ಹಳ್ಳಿಗಳಲ್ಲೂ ಕೂಡ. ಇದರಿಂದ ಕತೆಕೇಳುವ ವರವು ಕಳೆದು ಹೋಗುತ್ತದೆಯಲ್ಲದೆ ಕೇಳುವ ಸಮುದಾಯವೇ ಅಗೋಚರವಾಗುತ್ತದೆ. ಕತೆ ಹೇಳುವ ಕ್ರಿಯೆಯು ಮತ್ತೆ ಮತ್ತೆ ಕತೆಗಳನ್ನು ಪುನರಾವರ್ತನೆ ಮಾಡುವ ಕಲೆಯಿಂದ ಶಕ್ತಿ ಪಡೆಯುತ್ತದೆ. ಕತೆಗಳು ನೆನಪಿನಲ್ಲಿ ಉಳಿಯದಿದ್ದಾಗ ಪುನರಾವರ್ತಿಸುವ ಅಭ್ಯಾಸವೂ ಮರೆಯಾಗುತ್ತದೆ. ಏಕತಾನತೆ ಹಾಗು ಬೇಸರವನ್ನು ಹೆಚ್ಚಿಸುತ್ತಿದ್ದ ನೇಯುವಿಕೆಯಾಗಲೀ, ನೂಲುವಿಕೆಯಾಗಲೀ ಇವತ್ತು ಇಲ್ಲ. ಕೇಳುಗ ಹೆಚ್ಚು ಹೆಚ್ಚು ಸ್ವ-ಮರೆವನ್ನು ರೂಡಿಸಿಕೊಂಡರೆ ಅವನು ಕೇಳುವ ವಿಷಯ ನೆನಪಿನಲ್ಲಿ ಅಚ್ಚೊತ್ತುತ್ತದೆ. ಕೆಲಸದ ಲಯ ಅವನನ್ನು ಸ್ವಾದೀನಕ್ಕೆ ತೆಗೆದುಕೊಂಡಾಗ ಅವನು ಕತೆಯನ್ನು ಯಾವ ರೀತಿ ಕೇಳುತ್ತಾನೆಂದರೆ ಅದನ್ನು ಪುನರಾವರ್ತನೆ ಮಾಡುವುದು ತಾನೇ ತಾನಾಗಿ ಬರುತ್ತದೆ. ಇದು ಕತೆ ಹೇಳುವ ಕಲೆಯನ್ನು ತೂಗುವ ಬಲೆಯ ಲಕ್ಷಣ. ಪ್ರಾಚೀನ ಕಾಲದ ಕುಶಲಕರ್ಮಿಗಳನ್ನು ಸುತ್ತಲೂ ವ್ಯಾಪಿಸಿಕೊಂಡು ಹೆಣೆಯಲ್ಪಟ್ಟ ಈ ಕಲೆಯು ಇಂದು ಎಲ್ಲಾ ಕೊನೆಗಳಲ್ಲಿ ಸಿಕ್ಕಿ ಹಾಕಿಕೊಂಡು ಸವೆಯುತ್ತಿದೆ.


ಲೆಸ್ಕೋವ

– ಡಾ॥ ಸರಸ್ವತಿ ಕೆ.ಬಿ.
n.sarassri@rediffmail.com

:ವಿಶೇಷ ಸೂಚನೆ :

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಂಶದಲ್ಲಿ ಟೈಪ್ ಮಾಡಿ prathispandha@gmail.comಗೆ ಕಳುಹಿಸುವುದು.

ಇಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ವಿಚಾರಗಳಿಗೆ ಲೇಖಕರೇ ಜವಾಬ್ದಾರರು.
ಲೇಖನಗಳನ್ನು ಕಳುಹಿಸುವ ಲೇಖಕರು ಓದುಗರ ಅನುಕೂಲಕ್ಕಾಗಿ ಹೆಸರು, ವಿಳಾಸ, ದೂರವಾಣಿ ಸಂಖ್ಯೆ, ಇಮೇಲ್ ವಿಳಾಸವನ್ನು ನೀಡತಕ್ಕದ್ದು.

ಸಾಹಿತ್ಯ ಶೈಲಿ/ ರೂಪ

# Roland Barthes ನ ವಿಶ್ಲೇಷಣಾ ನೆಲೆಯಲ್ಲಿ Edger Allen Poe ನ ಸಣ್ಣಕತೆ 'The Facts in the Case of M.Valdemer'



ಭಾಷೆಯ ಮೂಲಕ ವ್ಯಕ್ತವಾಗುವ ಕಥೆ, ಕಾದಂಬರಿ, ಕಾವ್ಯ ವಿನ್ಯಾಸಗಳನ್ನು ವಿಮರ್ಶಿಸುವುದಕ್ಕೆ ಹಲವಾರು ವಿಶ್ಲೇಷಣಾ ಮಾರ್ಗಗಳು, ವಿಧಾನದ ಮಜಲುಗಳಿವೆ. ಇವುಗಳಲ್ಲಿ ಸ್ವಯಂತಿಳುವಳಿಕೆ (Heuristic), ಅರ್ಥವಿವರಣಾ ವಿಮರ್ಶೆ (Interpretative criticism), ಶೈಲಿಶಾಸ್ತ್ರ, ರಚನಾವಾದ, ಪ್ರಾಯೋಗಿಕ ವಿಮರ್ಶೆ ಅಥವಾ ಪಠ್ಯದ ಸೂಕ್ಷ್ಮ ಓದು ಪಠ್ಯವನ್ನು ಅರ್ಥೈಸುತ್ತದೆ, ವಿವರಿಸುತ್ತವೆ. ಇವೆಲ್ಲವೂ ಪಠ್ಯವನ್ನು ಇಂತಿಷ್ಟೇ, ಹೀಗಷ್ಟೇ, ಎಂದು ಗುರುತಿಸುವುದನ್ನು ಅಥವಾ ನಿಗಧಿಪಡಿಸುವುದನ್ನು ಬಾರ್ಥ್ ವಿರೋಧಿಸುತ್ತಾನೆ ಎಂಬುದನ್ನು ನಾವು ತಿಳಿದಿದ್ದೇವೆ. ಆತನ ಪ್ರಕಾರ ಒಂದು ಸಣ್ಣಕಥೆ ಅಥವ ಕಾದಂಬರಿಯ ಯಾವುದೇ ತರಹದ ಓದು ವಿಶ್ಲೇಷಣೆಯಾಗುತ್ತದೆ ಮತ್ತು ಅಂತಹ ವಿಶ್ಲೇಷಣೆಯೇ, ಒಂದು ಪ್ರಮೇಯವಾಗಿರುತ್ತದೆ (Theory). ಯಾಕೆಂದರೆ, ಭಾಷೆಗೆ ತನ್ನಿಂದ ತಾನೇ ಅರ್ಥ ರಚಿಸಿಕೊಳ್ಳುವ ಸಾಮರ್ಥ್ಯವಿರುತ್ತದೆ. ಹಾಗಾಗಿ ವಿವರಣೆಯು ತನ್ನಿಂದ ತಾನೇ ಸ್ವಯಂ ರಚನೆಯ ಹಾದಿ ಹಿಡಿಯಬಲ್ಲದು. ಬಾರ್ಥ್ ವಿವರಿಸುವ ಹಾಗೆ, "ನನ್ನ ಉದ್ದೇಶ, ಒಂದು ಸಣ್ಣ ಕಥೆಯನ್ನು ಓದಿ ಅದರ ರಚನೆಯನ್ನು ನಿಮಗೆ ತಲುಪಿಸುವುದಲ್ಲ, ಅಥವಾ ಸಣ್ಣ ಕಥೆಯ ಅರ್ಥವನ್ನು ವಿವರಿಸುವುದಲ್ಲ, ಬದಲಾಗಿ, ಪಠ್ಯ ಹೇಗೆ ತನ್ನಿಂದ ತಾನೇ ಬಿಡಿಸಿಕೊಳ್ಳುವ ಹಾದಿಯಲ್ಲಿ ಹಾಯಾಗಿ, ಯಾವುದೇ ಮೋಹವಿಲ್ಲದೆ ತನ್ನಿಂದ ತಾನೇ ಸಂಕೇತಗಳಿಗೆ ತೆರೆದುಕೊಳ್ಳುತ್ತದೆ ಅನ್ನುವುದನ್ನು ಸ್ಪಷ್ಟವಾಗಿ ತೋರಿಸುವುದಾಗಿದೆ. ನಾನು ತೋರಿಸುವ ಪಠ್ಯದ ವಿನ್ಯಾಸವು ಪಠ್ಯ ಓದುವಾಗ ಆಗುವ ಪ್ರಕ್ರಿಯೆಯಿಂದ ಹೊರಗೆ ಹೋಗುವುದಿಲ್ಲ. ನಾನು ಪಠ್ಯದಲ್ಲಿ ನೋಡುವ ವಿನ್ಯಾಸವು ಚಲನಾಶೀಲವಾಗಿದೆ ಹಾಗೂ ಅನಂತತೆಯನ್ನು ಹೊಂದಿದೆ, ಒಂದು ಕಥನವು ತನ್ನಿಂದ ತಾನೇ ಅಖಂಡತೆಯನ್ನು ಸೃಷ್ಟಿಸಿಕೊಳ್ಳುತ್ತದೆ".

ಬಾರ್ಥ್ ನ ವಿಶ್ಲೇಷಣೆಯಲ್ಲಿ ಸಂಕೇತ ಅಥವಾ Code ಗಳದ್ದು, ಪ್ರಮುಖ ಪಾತ್ರ, Code ಅಂದರೆ ಪಠ್ಯದ ಆಚೆಗಿನ ಸುವ್ಯವಸ್ಥಿತ ಸಂಘಟನೆ ಅಥವಾ ಅದಕ್ಕೆ ಹೊಂದಿಕೊಂಡಂತಿರುವ ಭಾಗೀದಾರ ಕಥನಗಳು ಎಂದರ್ಥ. ಇಂತಹ ಸಂಕಥನಗಳು ಒಂದು ಪ್ರಸ್ತುತ ಪಠ್ಯಕ್ಕೆ ಅರ್ಥ ವಿನ್ಯಾಸವನ್ನು ಹೇರುತ್ತವೆ. ಉದಾಹರಣೆಗೆ, ಒಂದು ಪಠ್ಯದ ಸಾಲಿನಲ್ಲಿ ವೈದ್ಯಕೀಯ ಸಂಕೇತವು ಇದ್ದಲ್ಲಿ, ಈ ಸಂಕೇತವು ಒಬ್ಬ ಓದುಗನಲ್ಲಿರುವ ವೈದ್ಯಕೀಯ ತಿಳುವಳಿಕೆಯನ್ನೆಲ್ಲ ಒಟ್ಟುಗೂಡಿಸುತ್ತದೆ. ಹಾಗೂ ಪಠ್ಯವನ್ನು ಅರ್ಥೈಸಲು ಓದುಗನ ವೈದ್ಯಕೀಯ ಹಾಗೂ ಪ್ರಯೋಗಾತ್ಮಕ ಜ್ಞಾನವು ಸಹಾಯ ಮಾಡುತ್ತದೆ. ಹಾಗೆಯೇ ಒಂದು ಶಬ್ದಾಲಂಕಾರದ ಸಂಕೇತವು ಒಂದು ಪಠ್ಯದಲ್ಲಿದ್ದಾಗ, ಭಾಷೆಯ ಸಾಮಾಜಿಕ ನಿಯಮಗಳನ್ನೆಲ್ಲಾ ಈ ಒಂದು ಸಂಕೇತವು ಓದುಗನ ಮನಸ್ಸಿನಲ್ಲಿ ಕಲೆ ಹಾಕುತ್ತದೆ. ಒಂದು ಕಥನದ ಕ್ರಿಯೆಯಲ್ಲಿ ಐತಿಹಾಸಿಕ ಹಾಗೂ ಸಾಮಾಜಿಕ ಸಂಕೇತವು ಇದ್ದಾಗ ಅಂತಹ ಸಂಕೇತವು ನಮಗಿರಬಹುದಾದ ಅಥವಾ ಓದುಗರಿಗಿರಬಹುದಾದ ಸಹಜ ಜ್ಞಾನವನ್ನು ಸಜ್ಜುಮಾಡಿ, ಪಠ್ಯದಲ್ಲಿ ಇರುವ ಸಂಕೇತವನ್ನು ಅರ್ಥೈಸಿಕೊಳ್ಳಲು ಸಹಾಯ ಮಾಡುತ್ತವೆ. ಒಂದು ಕಥನದ ಕ್ರಿಯೆಗಳನ್ನು ಜೋಡಿಸುವ ಅನುಕ್ರಮಣಿಕೆಯಲ್ಲಿ ಕೂಡ ವಿಧಗಳಿವೆ, ಮೊದಲನೆಯದು, ಕ್ರಿಯೆಯ ಅನುಕ್ರಮಣಿಕೆ

ಸುಲಭವಾಗಿ ಅರ್ಥವಾಗುವಂಥದ್ದು, ತರ್ಕಬದ್ಧವಾಗಿದ್ದು. ಒಂದು ಕ್ರಿಯೆ ಹಾಗೂ ಮತ್ತೊಂದು ಕ್ರಿಯೆಯ ಸಂಬಂಧವನ್ನು ಸುಲಭವಾಗಿ ಊಹೆ ಮಾಡಬಲ್ಲಂಥದ್ದು. ಎರಡನೆಯದ್ದು, ಕ್ರಿಯೆಗಳ ಅನುಕ್ರಮಣಿಕೆ ವೈಜ್ಞಾನಿಕ ತರ್ಕವನ್ನು ಬಿಟ್ಟು ಸಾಮಾನ್ಯ ತರ್ಕ ಹೊಂದಿದ್ದು, ಕ್ರಿಯೆಗಳು ಆಂತರಿಕ ಸಂಬಂಧ ಹೊಂದಿರುತ್ತವೆ. ಇಂತಹ ಹೊಂದಾಣಿಕೆ ಔಪಚಾರಿಕವಾಗಿ ತರ್ಕಬದ್ಧವಾಗಿರದೆ ನಮ್ಮ ದಿನನಿತ್ಯದ ತರ್ಕ ಅಭ್ಯಾಸದ ಹಾದಿಯನ್ನು ಹಿಡಿಯುತ್ತದೆ. ಇದನ್ನು Endoxal ಅಥವ ಅರ್ಥ ಕಲ್ಪಿಸಲ್ಪಟ್ಟ ತರ್ಕವೆಂದು ಕರೆಯುತ್ತೇವೆ.

ಬಾರ್ಥ್ ನು ವಿಶ್ಲೇಷಿಸುವ Edgar Allen Poe ನ ಕಥೆಯಲ್ಲಿ, Valdemer ಎಂಬ ಕಥಾನಾಯಕನ ಆರೋಗ್ಯದಲ್ಲಿನ ಬದಲಾವಣೆಗಳು ಆತನ ವೈದ್ಯಕೀಯ ಸಾವನ್ನು ಅರ್ಥೈಸುತ್ತದೆ. ಆದರೆ, ಆತನ ವೈದ್ಯಕೀಯ ಸಾವಿನ ನಂತರದ ಸ್ಥಿತಿಯನ್ನು ಮೇಲೆ ಹೇಳಿದ Endoxal ಅಥವಾ ಕಲ್ಪಿಸ್ಪಟ್ಟ ತರ್ಕಧಿಂದ ಮಾತ್ರ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. Valdemer ನು ವೈದ್ಯಕೀಯವಾಗಿ ಸಾವನ್ನು ಹೊಂದಿದ್ದರೂ, ಮತ್ತೆ ವಶೀಕರಣದಿಂದ (Hypnosis) ಆತನನ್ನು ಮಾನಸಿಕವಾಗಿ ಜೀವಂತವಾಗಿಡಲಾಗುತ್ತದೆ. ಇದೇ ಕಥೆಯ ವಿಶೇಷತೆ. ಇದನ್ನು ನಾವು ಕಲ್ಪಿಸಲ್ಪಟ್ಟ ತರ್ಕದಲ್ಲಿ ಮಾತ್ರ ಅರ್ಥ ಮಾಡಿಕೊಳ್ಳಬಹುದು.

ಬೇರೆ ಬೇರೆ ಸಂಕೇತಗಳು ಕಥೆಯ ತುಣುಕುಗಳನ್ನು ಹಾದು ಹೋಗುತ್ತವೆ. ನಾವು ಬೇಕೆಂದೇ ಈ ಸಂಕೇತಗಳನ್ನು ಮತ್ತೆ ಒಂದು ವಿನ್ಯಾಸಕ್ಕೆ (Structuration) ಗೆ ಹೊಂದಿಸುವುದನ್ನು ಬೇಡವೆನ್ನುತ್ತಾನೆ ಬಾರ್ಥ್ ಏಕೆಂದರೆ ಈ ಸಂಕೇತಗಳು ಈಗಾಗಲೇ ಓದಿದ (Deja-lu) ಚಿಹ್ನೆಗಳಿಂದ ಬಿಡುಗಡೆ ಹೊಂದಿ ಈಗಾಗಲೇ ಮಾಡಲ್ಪಟ್ಟ (Deja-fail) ಹಾಗೂ ಜಗತ್ತಿನಲ್ಲಿ ಇರುವ ಎಲ್ಲಾ ಪಠ್ಯಗಳನ್ನು ಒಳಗೊಂಡಿರುವ (Deja) ಸಂಕೇತಗಳಿಗೆ ಸೇರಿರುತ್ತವೆ. ಪೋ ನ ಕಥೆಯಲ್ಲಿನ ಸಂಕೇತಗಳು ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ಸಂಘರ್ಷದಲ್ಲಿವೆ. ವೈದ್ಯಕೀಯ ಸಾವು ಹೊಂದಿದ Valdemerನು ವಶೀಕರಣದ ಪ್ರಭಾವದಿಂದ ಮಾನಸಿಕವಾಗಿ ಜೀವಂತ ವಾಗಿರುತ್ತಾನೆ. ಇದು ಸಾಂಸ್ಕೃತಿಕ ಅಥವಾ ಕಲ್ಪಿಸಲ್ಪಟ್ಟ ತರ್ಕ. ಇಲ್ಲಿ ವೈದ್ಯಕೀಯ ಹಾಗೂ ಕಲ್ಪಿಸಲ್ಪಟ್ಟ ತರ್ಕಗಳು ಒಂದಕ್ಕೊಂದು ಕದನದಲ್ಲಿವೆ, ಆದರೆ, ಇದು ತರ್ಕ ಸಮ್ಮತಿಯನ್ನು ವಿರೋಧಿಸುವುದಿಲ್ಲ, ಬದಲಾಗಿ, ಕಥೆಯ ವಿನ್ಯಾಸದ ಅವಿಭಾಜ್ಯ ಅಂಗವಾಗಿರುತ್ತದೆ. ಇಂತಹ ಸಂಘರ್ಷಗಳೇ ವಿನ್ಯಾಸಗಳಾಗುವ ಕ್ರಿಯೆಗಳು. ರಚನೆಗಳನ್ನು ಹೊರಗಿಟ್ಟು ನೋಡುವ ಪ್ರಕ್ರಿಯೆಯನ್ನು ನಾವಿಲ್ಲಿ ಕಲಿಯುವ ಪ್ರಯತ್ನ ಮಾಡಬೇಕಿರುತ್ತದೆ ಎನ್ನುತ್ತಾನೆ ಬಾರ್ತಸ್.

ಹಾಗಾಗಿ, ಪಠ್ಯವಿಶ್ಲೇಷಣೆಯಲ್ಲಿ ಪಠ್ಯವನ್ನು ಒಂದು ಅಂಗಾಂಶವಾಗಿ, ಹಲವಾರು ಧ್ವನಿಗಳ ಹಾಗೂ ಸಂಕೇತಗಳ ಹೆಣಿಗೆಯಾಗಿ, ಹೇಗೆ ವಿರುದ್ಧ ಸಂಕೇತಗಳು, ಧ್ವನಿಗಳು ಹಾಗು ಎಳೆಗಳು ಒಂದಕ್ಕೊಂದು ಹೆಣೆದುಕೊಂಡು ಸಂಪೂರ್ಣತೆಯ ಹಾದಿಯಲ್ಲಿವೆ, ಎನ್ನುವುದನ್ನು ಪ್ರತಿನಿಧಿಸುವುದು ಬಾರ್ತಸ್ ನ ಕಥಾ ವಿಶ್ಲೇಷಣೆಯ ಉದ್ದೇಶವಾಗಿದೆ. ಯಾವುದೇ ಕಥೆಗೆ ಒಂದು Listening ಚೌಕಟ್ಟು ಇರುತ್ತದೆ. ಹಾಗಾಗಿ ಅರ್ಥದ ಅಸ್ತಿತ್ವ ಒಂದು ವಿಸ್ತರಣೆ ಅಲ್ಲ, ಬದಲಾಗಿ ಒಂದು ಸ್ಫೋಟ (Explosion). ಒಂದು ಸಂಬಂಧದ ಆಹ್ವಾನ, ಸಂವಹನ, ಒಂದು ಒಪ್ಪಂದದ ಅಸ್ತಿತ್ವ ಕೊಟ್ಟು ತೆಗೆದುಕೊಳ್ಳುವ ಪ್ರಕ್ರಿಯೆ. ಒಂದು ಝಲಾಕ್ ಅಥವಾ ಜ್ಞಾನದ ಹೊಳಪು.

ಒಂದು ಪಠ್ಯದಲ್ಲಿ ಎರಡು ವಿಧದ ವಿನ್ಯಾಸದ ಪ್ರಕ್ರಿಯೆಗಳಿಂದ ಕಥೆಯ ವಿಸ್ತಾರವನ್ನು ಓದಿನ ನಿರೀಕ್ಷೆಯೊಂದಿಗೆ ಎಳೆದುಕೊಂಡು ಹೋಗಬಹುದಾಗಿದೆ. ಮೊದಲನೆಯದು ರೂಪವಿಕಾರ (Distortion). ಕ್ರಿಯೆಯ ಕ್ರಮಾನುಗತಿಯಲ್ಲಿನ ಜೋಡಣೆಯನ್ನು ಬೇರ್ಪಡಿಸುವುದು ಹಾಗೂ ಮಧ್ಯದಲ್ಲಿ ಒಂದು ವಿಜಾತಿಯ (Heterogeneous) ಅಂಶವನ್ನು

ಸೇರಿಸುವುದು ಹಾಗೂ ಸಾಲಿನ ಕ್ರಮಗತಿಯನ್ನು ಸ್ವಲ್ಪ ಹೊತ್ತು ತೊರೆದು ಆಮೇಲೆ ಮುಂದೆಲ್ಲಿಯೋ ಕೈಗೆತ್ತಿಕೊಳ್ಳುವುದು. ಈ ಮೂಲಕ ನಿರೀಕ್ಷೆಯನ್ನು ಸೃಷ್ಟಿಸುವುದು ಇದರ ಕ್ರಮ. ಕ್ರಿಯೆಯ ಕ್ರಮಗತಿ ಒಂದು ತೇಲುವ ಸೂಕ್ಷ್ಮವಿನ್ಯಾಸ (Floating Microstructure). ಇಂಥ ಸೂಕ್ಷ್ಮ ವಿನ್ಯಾಸವು ಒಂದು ತರ್ಕಬದ್ಧವಾದ ವಸ್ತುವನ್ನು ಸೃಷ್ಟಿಸದೆ, ನಿರೀಕ್ಷೆ ಹಾಗೂ ಅದರ ಉಪಸಂಹಾರವನ್ನು ಸೃಷ್ಟಿಸುತ್ತದೆ.

ಎರಡನೆಯದು, ವಿಪರ್ಯಾಸಗೊಳಿಸಲಾಗದ ಪ್ರಕ್ರಿಯೆ. (Irreversibility). ಕಥೆಯ ವಿಸ್ತಾರ ಒಂದು ತೇಲುವ ಸೂಕ್ಷ್ಮ ವಿನ್ಯಾಸವಾಗಿದ್ದು, ಸಾಂಪ್ರದಾಯಿಕವಾಗಿ ಎರಡು ಸಂಕೇತಗಳು (Code) ಗಳು ಕಥೆಗೆ ದಿಕ್ಕು ತೋರಿಸುತ್ತವೆ. ಮೊದಲನೆಯದ್ದು ಕ್ರಿಯೆಯ ಅನುಕ್ರಮಣಿಕೆ (Sequence) ತರ್ಕ ಸಮ್ಮತವಾಗಿರುತ್ತದೆ. ಮತ್ತೊಂದು ಗೂಢಪ್ರಶ್ನೆ (Enigma) ಕಥೆಯ ಅನುಕ್ರಮಣಿಕೆಯಲ್ಲಿ ತಳಿಕೆ ಹಾಕಿಕೊಂಡು ಕಥೆಗೆ ನಿರೀಕ್ಷೆಯನ್ನು ತಂದುಕೊಡುತ್ತದೆ.

ಕಥೆಯ ಪ್ರತಿಯೊಂದು ವಾಕ್ಯದಲ್ಲಿ ಎರಡು ಅಥವಾ ಹೆಚ್ಚು ಸಂಕೇತಗಳ ಉಲ್ಲೇಖವಿರುತ್ತದೆ. ಅದರಲ್ಲಿ ಯಾವುದು ಸರಿ ಅಥವಾ ತಪ್ಪು ಎನ್ನುವುದನ್ನು ಆರಿಸಿಕೊಳ್ಳಲು ಓದುಗನೊಬ್ಬನಿಗೆ ಕಷ್ಟವಾಗುತ್ತದೆ. ಕಥಾವಸ್ತುವೊಂದು ಪಠ್ಯವಾಗುತ್ತದೆ. ನಮ್ಮನ್ನು ಅನಿಶ್ಚಿತತೆಯೆಡೆಗೆ ಕರೆದೊಯ್ಯುತ್ತದೆ. ಲೇಖಕ ಕೂಡ ತನ್ನ ಉತ್ಪಾದಕತೆಯಲ್ಲೇ ಸಿಕ್ಕಿಕೊಂಡ ಪ್ರದರ್ಶನಾ ಪಾತ್ರವಾಗಿ ಬಿಡುತ್ತಾನೆ. ಒಂದೇ ಉಚ್ಚಾರಣೆಯಲ್ಲಿ ಹಲವಾರು ಸಂಕೇತಗಳು ಹಾಗೂ ಧ್ವನಿಗಳು ಯಾವುದೇ ಪ್ರಾಮುಖ್ಯತೆಯಿಲ್ಲದ ಅಸ್ತಿತ್ವದಲ್ಲಿರುತ್ತವೆ. ಹಾಗಾಗಿಯೇ ಒಂದು ಕಥೆಯ ನಿರೂಪಣೆಗೆ ಒಂದೇ ನಿಶ್ಚಿತವಾದ, ನಿರಂಕುಶವಾದ ಅರ್ಥ ತೀರ್ಮಾನ ಮಾಡಲಾಗುವುದಿಲ್ಲ.

ಬಾರ್ತಸ್ ಒಂದು ಸಣ್ಣ ಕಥೆಯನ್ನು ಹಲವಾರು ಸಣ್ಣ ಸಣ್ಣ ಭಾಗಗಳಾಗಿ ಕತ್ತರಿಸುತ್ತಾನೆ. (ಒಂದೊಂದು ಭಾಗವೂ ಒಂದು ವಾಕ್ಯವಾಗಿರಬಹುದು/ವಾಕ್ಯ ಭಾಗವಾಗಿರಬಹುದು/3-4 ವಾಕ್ಯಗಳೂ ಆಗಿರಬಹುದು. ಈ ಭಾಗಗಳನ್ನು Lexia ಎಂದು ಕರೆಯುತ್ತಾನೆ. ಪ್ರತಿಯೊಂದು Lexia ಗೂ ಒಂದೊಂದು ಸಂಖ್ಯೆಗಳನ್ನು ನಿಗಧಿಗೊಳಿಸಲಾಗುವುದು. Lexia ಒಂದು ಪಠ್ಯದ ಅರ್ಥಸೂಚಕ ಆಗುತ್ತದೆ. ಬಾರ್ತಸನ ಉದ್ದೇಶ ಈ ಅರ್ಥ ಸೂಚಕಗಳನ್ನು ವ್ಯಾಖ್ಯಾನಿಸುವುದಲ್ಲ. ಇದು Stylistics ನ ಕೆಲಸ. ಬದಲಾಗಿ ಅರ್ಥದ ಹಾದಿಯನ್ನು ಅವಲೋಕಿಸುವುದು ಅವನ ಗುರಿ. ಈ ದಾರಿಯಲ್ಲಿ ಅರ್ಥಸೂಚಿತ (signified) ಮತ್ತು ಅರ್ಥಸೂಚಕ (Signifier)ಈ ಎರಡರ ನಡುವೆ ನಿಖರವಾದ ಹೊಂದಾಣಿಕೆ ಇಲ್ಲದಿರುವುದನ್ನು ಗಮನಿಸುತ್ತಾನೆ.

ಕಥನದಲ್ಲಿ Lexia ಗಳು ನಿರಂಕುಶವಲ್ಲ. ಹಾಗಾಗಿ Lexia ಗಳಾಗಿ ವಿಂಗಡಿಸುವುದು ನಮ್ಮ ಅನುಕೂಲಕ್ಕಾಗಿ ಮಾತ್ರ. ಮತ್ತು Lexia ಅನ್ನುವುದು ಅರ್ಥಗಳು ಹಂಚಿಕೆಯಾದ ಒಂದು Segment. ಇದನ್ನು ವೈದ್ಯಕೀಯ ಪರಿಭಾಷೆಯಲ್ಲಿ ಶಸ್ತ್ರ ಚಿಕಿತ್ಸಾ ಕ್ಷೇತ್ರ ಅನ್ನಬಹುದು. ಒಂದು ಪ್ರಯೋಜನಾಕಾರಿ Lexia ದಲ್ಲಿ ಎರಡು ಅಥವಾ ಮೂರು ಅರ್ಥಗಳು ಒಂದರ ಮೇಲೊಂದು ಹೆಣೆದು ಕೊಂಡಿರುತ್ತವೆ. ವಿಶ್ಲೇಷಣೆಗೆ ಬಾರ್ತಸನು Lexia ಗಳ ಪದದ ಅರ್ಥವನ್ನು (Denotation) ಅವಲಂಬಿಸದೆ ಧ್ವನ್ಯಾರ್ಥ (Connotation) ದ ಕಡೆಗೆ ಗಮನಹರಿಸುತ್ತಾನೆ. ಬಾರ್ತಸ್ ತನ್ನ ಪಠ್ಯ ವಿಶ್ಲೇಷಣೆಗೆ Edger Allen Poe ನ ಸಣ್ಣ ಕಥೆ The Facts in the case of M.Valdemer' ನನ್ನು ಆರಿಸಿಕೊಳ್ಳುತ್ತಾನೆ. ಇದರ ಪಠ್ಯ ವಿಷಯ (Theme) ಧಾರ್ಮಿಕ ಹಾಗೂ ವೈಜ್ಞಾನಿಕ ಸಂಕೇತಗಳನ್ನೊಳಗೊಂಡ 'ಸಾವು'.

**Lexia 1 ರಿಂದ 17 ರ ವಿವರಣೆಗಳು**

1. Mr.Valdemarನ ಕೇಸಿನಲ್ಲಿರುವ ವಸ್ತುಸ್ಥಿತಿಗಳು.
2. Valdemar ನ ಅಸಾಧಾರಣ (Extraordinary)ಅವಸ್ಥೆ ಚರ್ಚೆಗೆ ಗ್ರಾಸವಾಗಿರುವುದು ಆಶ್ಚರ್ಯವೇನಲ್ಲ.
3. ಸಂಬಂಧಿಸಿದವರು ಈ ವಿಷಯವನ್ನು ಸಧ್ಯಕ್ಕಂತೂ ಸಾರ್ವಜನಿಕರಿಂದ ಮುಚ್ಚಿಡಬೇಕೆಂದಿದ್ದಾರೆ, ಅಥವಾ ತನಿಖೆ ಆಗುವವರೆಗೂ ಮುಚ್ಚಿಟ್ಟರೆ ಒಳ್ಳೆಯದೆಂದು ಅಂದುಕೊಂಡಿದ್ದಾರೆ.
4. Valdemar ನ ಕೇಸ್ ಸಮಾಜದಲ್ಲಿ ಉತ್ಪ್ರೇಕ್ಷೆಯ ಸಂಗತಿಯಾಗಿ, ಅಪ್ರಿಯವಾದ ಪ್ರತಿಧ್ವನಿಯಾಯಿತು, ಸಹಜವಾಗಿಯೇ ಸಾಕಷ್ಟು ಅವಿಶ್ವಾಸಕ್ಕೂ ಕಾರಣವಾಯಿತು.
5. ಹಾಗಾಗಿ, ಈಗ ವ್ಲಾಡಿಮೀರನ ಕೇಸ್‌ನ ನಿಜಸ್ಥಿತಿಯನ್ನು ನಾನು ಕೊಡುವುದು ಅವಶ್ಯವಾಗುತ್ತದೆ.
6. ಅವು ಯಾವುವೆಂದರೆ,
7. ಇತ್ತೀಚೆಗಿನ ೩ ವರ್ಷಗಳಲ್ಲಿ ನನ್ನ ಗಮನವನ್ನು ವಶೀಕರಣ ವಿದ್ಯೆ ಸೆಳೆಯುತಿದೆ.
8. ಕಳೆದ ೯ ತಿಂಗಳ ಹಿಂದೆ ನಡೆದ ಪ್ರಯೋಗಗಳಲ್ಲಿ
9. ಒಂದು ಪ್ರಮುಖವಾದ ವಿಷಯವನ್ನು ಬಿಟ್ಟು ಬಿಡಲಾಗಿದೆ.
10. ಅದು ಯಾವುದೆಂದರೆ Articuls mortis. ಅಂದರೆ ಒಬ್ಬ ವ್ಯಕ್ತಿಯನ್ನು ವೈದ್ಯಕೀಯ ಮರಣದಲ್ಲಿದ್ದಾಗ ವಶೀಕರಿಸುವುದು ಎಂದು.
11. ಕಾಯ್ದು ನೋಡಬೇಕಾಗಿದದ್ದು.
12. ಅಂತಹ ಪರಿಸ್ಥಿತಿಯಲ್ಲಿ ಅಂದರೆ ವೈದ್ಯಕೀಯ ಮರಣದಲ್ಲಿದ್ದಾಗ ರೋಗಿಗೆ ಆಯಸ್ಕಾಂತೀಯ ಆಕರ್ಷಣೆಯ ಪ್ರಭಾವಕ್ಕೆ ಒಳಗಾಗುವ ಮೃದುತ್ವ ಇರುತ್ತದೆಯೋ?
13. ಇದ್ದರೆ ಮರಣ ಹೊಂದಿದ ಪರಿಸ್ಥಿತಿಗೆ ಅನುಗುಣವಾಗಿ, ವಶೀಕರಣ ಕುಂಠಿತ ವಾಗುತದೆಯೋ ಅಥವಾ ಹೆಚ್ಚಾಗುತ್ತದೆಯೋ?
14. ಈ ಪ್ರಭಾವವಿದ್ದಲ್ಲಿ ಯಾವ ಮಟ್ಟಿಗೆ ಸಾವಿನ ಬರುವನ್ನು ಇಂತಹ ವಿಧಾನದಿಂದ ತಡೆಯಬಹುದು?
15. ತಿಳಿದುಕೊಳ್ಳಲು ಇನ್ನೂ ವಿಷಯಗಳಿದ್ದವು.
16. ಆದರೆ ಇದು ನನ್ನ ಕುತೂಹಲವನ್ನು ಕೆರಳಿಸಿವೆ.
17. ಕೊನೆಯದ್ದು ಇಂಥಹ ಪರಿಸ್ಥಿತಿಯು ಸಮಾಜದ ಮೇಲೆ ಮಾಡುವ ಪರಿಣಾಮಗಳು.

**ಬಾರ್ಥ್ ನ ವಿಶ್ಲೇಷಣೆ:**

ಒಂದನೇ Lexia ಕಥೆಯ ಶೀರ್ಷಿಕೆ. ಇದನ್ನು ವಿಶ್ಲೇಷಿಸುತ್ತಾ, ಬಾರ್ಥ್ "ಶೀರ್ಷಿಕೆಯನ್ನು ಕೊಡುವಾಗ ಶೀರ್ಷಿಕೆಯಿಂದ ಸ್ಪಷ್ಟವಾಗಿ ನಿರೂಪಿಸುವ, ಸಾರಿ ಹೇಳುವ, ನಿಖರವಾಗಿ ಸ್ಪಷ್ಟಪಡಿಸುವ, ಕಾರ್ಯವನ್ನು ಮಾಡಿಸುವುದರಲ್ಲಿ Poe ಸೋತ್ತಿದ್ದಾನೆ. ಸರಿಯಾದ ಅಭ್ಯಾಸ ಮಾಡಿಲ್ಲ", ಎನ್ನುತ್ತಾನೆ.

(ಎ) ಒಂದು ಸತ್ಯವನ್ನು ಬೇಧಿಸುವಾಗ ಅದರಲ್ಲಿ ರಹಸ್ಯವಾದ, ಒಗಟಾದ/ಗೂಢವಾದ ವಿಷಯವೊಂದು ಇರಲೇಬೇಕು ಹಾಗಾಗಿ ಶೀರ್ಷಿಕೆಯಲ್ಲಿರುವ 'ವಸ್ತುಸ್ಥಿತಿಗಳು' ಎಂಬ ಪದವು, ಗೂಢಾರ್ಥವನ್ನು ಪ್ರತಿಫಲಿಸುತ್ತದೆ. ಶೀರ್ಷಿಕೆ ಯಲ್ಲಿರುವ 'the' ಒಂದು definite article ಆಗಿರುವುದರಿಂದ, 'ಒಂದೇ ಒಂದು ನಿರಂಕುಶ ವಸ್ತುಸ್ಥಿತಿಯಿದೆ; ಪತ್ಯದ/ಕಥೆಯ ಎಲ್ಲಾ ಕ್ರಿಯೆಗಳೂ ಈ ನಿಶ್ಚಿತ ಸ್ಥಿತಿಯ ಮೂಲಕವೇ ಹಾದುಹೋಗಬೇಕು' ಅನ್ನುವುದು ಶೀರ್ಷಿಕೆಯಲ್ಲಿ ತಾನೇ ತಾನಾಗಿ ಸೂಚಿತ/ಧ್ವನಿತವಾಗುತ್ತದೆ. ಶೀರ್ಷಿಕೆಯಲ್ಲಿ ಗೂಢವಾಗಿರುವ, ಗಲಿಬಿಲಿ ಹುಟ್ಟಿಸುವ, ಪರಿಸ್ಥಿತಿಯನ್ನು ಘೋಷಿಸಲಾಗಿದೆ. ಶೀರ್ಷಿಕೆಯ Lexia ನಲ್ಲಿರುವ ಸಂಕೇತಗಳು ಎರಡು; ಮೊದಲನೆಯದ್ದು, ನಿಗೂಢತೆ/ರಹಸ್ಯ, ಮತ್ತೊಂದು ಸಧ್ಯದ ಪರಿಸ್ಥಿತಿಯ ಸತ್ಯದ ಅನ್ವೇಷಣೆ.

(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುತ್ತದೆ)

– ಕೆ.ಬಿ.ಜ್ಯೋತಿ
jyogowdev@gmail.com

ಕೆಲಸ ಇರುವವರನ್ನು ಒಂದು ಭೂತ ಕಾಡಿದಂತೆ
ಕೆಲಸ ಇಲ್ಲದವರನ್ನು ಸಾವಿರ ಭೂತ ಕಾಡುತ್ತವೆ. – ಸ್ಪಾನಿಶ್ ಗಾದೆ

ಪರಿಚಯ / ವ್ಯಕ್ತಿ

# ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್

ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್ ಲ್ಯಾಟಿನ್ ಅಮೇರಿಕಾದ ಕೊಲಂಬಿಯಾದ ಸಣ್ಣ ಪಟ್ಟಣ ಅರಕಟಕದಲ್ಲಿ 1928ರಲ್ಲಿ ಜನಿಸಿದನು. ತನ್ನ ತಾತ-ಅಜ್ಜಿಯ ಬಳಿ ಬಾಲ್ಯವನ್ನು ಕಳೆಯುತ್ತಾನೆ. ಕೊಲಂಬಿಯಾದ 'ಸಾವಿರ ದಿನಗಳ ಯುದ್ಧ' ದಲ್ಲಿ ಕರ್ನಲ್ ಆಗಿದ್ದ ತಾತ ತನ್ನ ಯೌವನದ ಸಾಹಸ ಕತೆಗಳನ್ನು ಹೇಳುತ್ತಾ, ಹೇಳುತ್ತಾ ಇತಿಹಾಸಕ್ಕೂ ನನಗೂ ಕಳ್ಳುಬಳ್ಳಿಯಾಗಿದ್ದ ಎನ್ನುತ್ತಾನೆ ಮಾರ್ಕ್ವೆಜ್. ಅಜ್ಜಿ ಕಟ್ಟುಕತೆಗಳನ್ನು ಹೇಳುವುದರಲ್ಲಿ ನಿಷ್ಣಾತೆ. ಕುಟುಂಬದವರ ಜೀವನ ಕತೆಗಳನ್ನು ಹೇಳುತ್ತಿದ್ದದಷ್ಟೇ ಅಲ್ಲ, ಮೊಮ್ಮಕ್ಕಳ ಜೀವನಗಳನ್ನು ಸಹ ಅವಳ ಕನಸಿನಲ್ಲಿ ಪಡೆದ ಸಂದೇಶಗಳನ್ನು ಅನುಸರಿಸಿ ಕಟ್ಟುತ್ತಿದ್ದಳು. ವಾಸ್ತವವನ್ನು ಅಲೌಕಿಕತೆ, ಯಕ್ಷಿಣೀ ಗುಣ ಹಾಗು ಮೂಢಾಚಾರಣೆಯ ನೋಟದಿಂದ ಅರಿಯಬಹುದು ಎಂಬ ತಿಳುವಳಿಕೆಯನ್ನು ಅವಳಿಂದಲೇ ಅವನು ಕಲಿತದ್ದು. 20ನೇ ವಯಸ್ಸಿನಲ್ಲಿ 'ಸಾಯದೆ ಬದುಕಬೇಕೆಂದರೆ ಬರೆಯಲೇ ಬೇಕು' ಎಂಬ ಹಂಬಲದಲ್ಲಿ ಮಾರ್ಕ್ವೆಜ್ ಬರವಣಿಗೆ ಶುರುಮಾಡುತ್ತಾನೆ.

ಮಾರ್ಕ್ವೆಜ್, ರಷ್ಯ, ಅಮೇರಿಕಾ ಹಾಗು ಇಂಗ್ಲೀಷ್ ಲೇಖಕರನ್ನು ತುಂಬಾ ಓದುತ್ತಾನೆ. "ನನ್ನಲ್ಲಿ ಒಳಅರಿವಿದೆ, ಸ್ವಯಂಪ್ರಕಾಶವಿದೆ ಎಂಬುದು ನಾನೇ ಸೃಷ್ಟಿಸಿರುವ ಮಿಥ್ಯ. ನನ್ನ ದಾರಿಯನ್ನು ಸಾಹಿತ್ಯದ ಮೂಲಕ ಕಟ್ಟಿಕೊಂಡೆ, ಓದುವುದು, ಬರೆಯುವುದು. ಅದೊಂದೇ ಹಾದಿ" ಎಂದು ಸಂತೋಷವಾಗಿ ಒಪ್ಪಿಕೊಳ್ಳುವ ಮಾರ್ಕ್ವೆಜ್‌ನನ್ನು ತೀವ್ರವಾಗಿ ಪ್ರಭಾವಿಸಿದವರು James Joyce, Kafka, Erskine Caldwell ಮತ್ತು Hemmingway. ಆದರೆ ವಿಲಕ್ಷಣವಾದದ್ದನ್ನು, ನಂಬಲಸಾಧ್ಯವಾದದ್ದನ್ನು ಓದುಗರು ನಂಬುವಂತೆ ಮಾಡುವ ಕಲೆಯನ್ನು ಮಾತ್ರ ಪತ್ರಿಕೋದ್ಯಮದಿಂದ ಕಲಿತೆ ಎನ್ನುತ್ತಾನೆ. "ಸೊಗಸು ಇರುವುದೇ ನೇರವಾಗಿ ಹೇಳುವುದರಲ್ಲಿ. ಪತ್ರಕರ್ತರು ಹಾಗು ಹಳ್ಳಿಗಾಡು ಮಂದಿ ಮಾತ್ರ ಹಾಗೆ ಹೇಳುತ್ತಾರೆ."

ಆತ್ಮಕ್ಕೆ ತಟ್ಟುವ ಸತ್ಯ, ಅನುಕಂಪ, ಕಾವ್ಯಾತ್ಮಕ ಮಾಂತ್ರಿಕತೆ ಯಿಂದ ತುಂಬಿ ತುಳುಕುವ ಅವನ ಪ್ರಮುಖ ಕೃತಿ 'ಒಂದು ನೂರು ವರ್ಷಗಳ ಏಕಾಂತ' ಲ್ಯಾಟಿನ್ ಅಮೇರಿಕಾದ ಗುಡ್ಡ ತಪ್ಪಲಿನ ಹಳ್ಳಿಯೊಂದರ ಕತೆ. ವ್ಯಸನ, ಕ್ರೌರ್ಯ,ಪ್ರೇತಗಳ ಮತ್ತು ಕನಸುಗಳ ಕಲ್ಪನಾಕಾವ್ಯ ಈ ಕಥನ. ಕಾಲದ ಜೋಕಾಲಿಯಲ್ಲಿ ಜೀಕುವ ಮಾರ್ಕ್ವೆಜ್‌ನ ಹೆಣಿಗೆಗಳು ರೀವಾಜಿನ, ಕ್ರಮಬದ್ಧವಾದ ಕಾಲಗತಿಯನ್ನು ಉಲ್ಲಂಘಿಸುತ್ತವೆ. ಅತಿಲೌಕಿಕವಾದ ಮತ್ತು ದಿನನಿತ್ಯದ ಜೀವನವೆರಡನ್ನು ಕೂಡಿಸಿ ಕಲ್ಪನೆ ಕಟ್ಟುವ ಮಾರ್ಕ್ವೆಜ್‌ನ ರೀತಿಗೆ ಇಡೀ ಪ್ರಪಂಚ ಮಾರುಹೋಯಿತು. ಕಾಳ್ಗಿಚ್ಚಿನಂತೆ 'ಮಾಂತ್ರಿಕ ವಾಸ್ತವವಾದ' (Magic Realism) ಬಗ್ಗೆ ಆಸಕ್ತಿ ಮೂಡಿತು. ಮಾರ್ಕ್ವೆಜ್, ಪದಗಳ ಆಡಂಬರದ ಬಳಕೆಯಿಂದ ಸಣ್ಣ ಘಟನೆಯನ್ನು ವೈಭವೀಕರಿಸುತ್ತ, ಪವಿತ್ರವಾದದ್ದನ್ನು ಕ್ಷುಲಕವಾಗಿಸುತ್ತಾ ನಿರಂತರವಾಗಿ ಕತೆ ಹೆಣೆಯುತ್ತಾನೆ. ಸಣ್ಣ ಘಟನೆಯೊಂದು ಅವನ ಕೈಯಲ್ಲಿ ಜೀವಸೆಲೆ ಉಕ್ಕಿಸುವ ಮಹಾಕಾವ್ಯವಾಗಿ ಬದಲಾಗುತ್ತದೆ. ಅವನು ಬರೆಯುವ, ಕತೆ ಹೆಣೆಯುವ, ಬದುಕುವ, ಮಾತಾಡುವ ರೀತಿಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ.

ನಂಬಲೇ ಅಸಾಧ್ಯವಾದ ಪ್ರತಿಭೆಯುಳ್ಳ ಈ ಲ್ಯಾಟಿನ್ ಅಮೇರಿಕಾದ ಕ್ರಾಂತಿಕಾರಿ ಲೇಖಕ ರಾಜಕಾರಣೀ ಕೂಡಾ ಹೌದು. ಸಾಹಿತ್ಯಕ್ಕಾಗಿ ಇರುವ ನೋಬಲ್ ಪಾರಿತೋಷಕವನ್ನು 1982ರಲ್ಲಿ ಪಡೆದಾಗ ಮಾಡಿದ ಭಾಷಣದಲ್ಲಿ ಲ್ಯಾಟಿನ್ ಅಮೇರಿಕಾದ ಜನರ ನೋವು, ಎಣೆಯಿಲ್ಲದ ಅವರ ಸಂಕಟ ಹಾಗು ಬಂಡವಾಳಶಾಹಿ ಯಜಮಾನಿಕೆಯಿಂದ ಬೇಕಂತಲೇ ತಪ್ಪಾಗಿ

ನಾನು ಹೆಂಡತಿಯನ್ನು ಭೇಟಿಯಾದದ್ದು ಪ್ರೀತಿಯ ಸುರಂಗದಲ್ಲಿ
ಅವಳದನ್ನು ಕೊರೆಯುತ್ತಿದ್ದಳು. – ಲೆಸ್‌ಡಾಸನ್

'ಅರ್ಥೈಸಲ್ಪಡುತ್ತಿರುವ ತನ್ನ ಜನರ Outsized reality' ಕುರಿತು ಹೇಳುವ ಮಾತುಗಳು ದಾಖಲಾರ್ಹ: ನನ್ನ ಜನರದ್ದು "ಕಾಗದದ ಮೇಲಿನ ವಾಸ್ತವವಲ್ಲ, ಆದರೆ ನಮ್ಮೊಳಗೆ ಬದುಕುವ ಮತ್ತು ನಾವು ದಿನಾದಿನಾ ಸಾಯುವ ಎಣೆಯಿಲ್ಲದ ಸಾವುಗಳ ಕ್ಷಣಕ್ಷಣಗಳನ್ನು ನಿರ್ಧರಿಸುವ ವಾಸ್ತವ, ಆದರೆ ಈ ವಾಸ್ತವವೇ ನಮ್ಮ ತಣಿಸಲಾಗದ ಸೃಜನಶೀಲತೆಯ ಸೆಲೆಯನ್ನು ಪೋಷಿಸುತ್ತಿರುವುದು, ಅಲೆಮಾರಿಯಂತೆ, ಮೈದುಂಬಿದವನಂತೆ ಕಾಣುವ ನಾನೇ ಅದರ ಗೂಢ ಸಂಕೇತ, ಅದೃಷ್ಟವಶಾತ್ ಪ್ರತ್ಯೇಕವಾಗಿದ್ದೇನೆ."

---

ಅಡಿಟಿಪ್ಪಣಿಗಳು:

Magic Realism ಪದಪ್ರಯೋಗವನ್ನು ಮೊದಲ ದಾರಿಗೆ ವಸ್ತುಪ್ರಪಂಚದ ದೃಷ್ಟಿಕೋನವನ್ನು ವಿರೋಧಿಸಿ ರಚಿಸಿದ ತನ್ನ ವಿಲಕ್ಷಣ ಬಣ್ಣ ಮತ್ತು ರೂಪವಿಕಾರ ಅಭಿವ್ಯಕ್ತಿ ವರ್ಣಚಿತ್ರಗಳನ್ನು (Expressionism) ಕುರಿತು ಹೇಳುವಾಗ ಜರ್ಮನ್ ಕಲಾವಿಮರ್ಶಕ Franz Roh 1925 ರಲ್ಲಿ ಬಳಸುತ್ತಾನೆ.

ಮಾರ್ಕ್ವೆಜ್ ನ ಪ್ರಮುಖವಾದ ಕೃತಿಗಳು: Leaf strom and Other stories (1955), One Hundred Years of Solitude (1970), The Autumn of the Patriarch (1975), Chronicle of a Death Foretold (1981), Love in the Time of Cholera (1985) ಮೂಲ ಸ್ಪಾನಿಷ್ ಭಾಷೆಯಿಂದ ಇಂಗ್ಲೀಷ್ ಗೆ ಅನುವಾದವಾಗಿರುವ One Hundred Years of Solitude ಕೃತಿಯನ್ನು ಕನ್ನಡಕ್ಕೆ ಎ. ಎನ್ ಪ್ರಸನ್ನ ಅವರು ಅನುವಾದಿಸಿದ್ದಾರೆ.

ಕೃಪೆ:

A talk with Gabriel Garcia Marquez by Marlise Simons and *Classics* by Jane Gleeson White, Orient Publishing 2010.

## ಸೃಜನಶೀಲ

### ಗಣೆ:

ಗಣೆ ಕೇಳುವ ಹಟ್ಟಿ
ಕಳ್ಳಿ ಬೇಲಿಯ ಮರೆಯಲ್ಲಿ
ಕಾವಿಗೆ ಕುಳಿತ ಕೋಳಿ.
ಹಾವು ಚೇಳು ಕಡಿಯದಂತೆ
ಕೇಡು ಬಡಿಯದಂತೆ
ಮಂತ್ರಿಸುವವ
ಯಾರಿಗೂ ಕಾಣದಂತೆ, ಕೇಳದಂತೆ,
ಓಡದಂತೆ, ಹರಿಯದಂತೆ, ಮುಟ್ಟದಂತೆ
ತನ್ನ ನಾದದೊಳಗೆ ತಾನೆ ಬಂಧಿ.
ಹಟ್ಟಿಗೆ ಬಿದ್ದ ಸಣ್ಣ ಕಿಡಿ ಬೆಂಕಿಯಾಗಿದೆ
ನಂದಿಸುವ ಹೊಣೆ ಯಾರದು?
ಬೆಳದಿಂಗಳಲ್ಲಿ ನುಡಿಯುವ ಗಣೆ
ದಿನ, ವಾರ, ತಿಂಗಳೆನ್ನದೆ
ಮೈದುಂಬಿ ಹರಿಯುತ್ತಿದೆ
ಇದರಲ್ಲಿ ಮುಳುಗಲು ದನ ಕಾಯಬೇಕು
ಕುರಿಯ ಬೆಚ್ಚಗಿನ ಹಾಲಿಗೆ ತುಟಿಯಾಗಬೇಕು
ವರ್ಷಗಳಿಂದ ಕಡೆದ ಮೊಸರು ಮಜ್ಜಿಗೆಯಾಗಿ,
ಬೆಣ್ಣೆ-ತುಪ್ಪವಾಗಿ ದೇಹದ ನರನರಗಳಲ್ಲಿ
ಇಳಿಯಬೇಕು
ನಾದವನ್ನು, ಬೆಳಕನ್ನು, ಕತ್ತಲೆಯನ್ನು
ಕಡೆಯುವವ
ನನ್ನೊಳಗಿನ ವಿಷವನ್ನು ಕಡೆಯುತ್ತಿದ್ದಾನೆ.

– ಕಾಂತರಾಜು ಕೆ.
9620160293

ಪಠ್ಯ - ಓದು

# Jane Eyre ಕಾದಂಬರಿಯಲ್ಲಿ 'ಅನ್ಯ' ಓದು

ಇತ್ತೀಚಿನ ದಿನಗಳಲ್ಲಿ ನಮ್ಮ ಸುತ್ತ ಮುತ್ತ ಜಾತಿ/ಜನಾಂಗೀಯ ಕ್ರೌರ್ಯ, ದಾಸ್ಯ ದಟ್ಟವಾಗಿ ಕವಿಯುತ್ತಿರುವ ಲಕ್ಷಣಗಳು ಹೆಚ್ಚಾಗುತ್ತಿವೆ. ಮೇಲ್ನೋಟಕ್ಕೆ ಮುಗ್ಧವಾಗಿ ಕಾಣುವ ಜೇನ್ ಐರ್ ಅಂತಹ ಪಠ್ಯಗಳಲ್ಲಿಯೂ ಸಹ ಈ ವಿಷಮತೆಗಳು ಸುಪ್ತವಾಗಿ ಹರಡಿಕೊಂಡಿರುವುದನ್ನು ಗಮನಿಸಬಹುದು. Charlotte Bronte ಯ ಈ ಕಾದಂಬರಿ ೧೯ನೇ ಶತಮಾನದ ಇಂಗ್ಲೀಷ್ ಸಾಹಿತ್ಯದಲ್ಲಿ ಕ್ಲಾಸಿಕ್ ಎಂದು ಹೆಸರುಮಾಡಿದೆ. ಕಥಾನಾಯಕಿ, ಮಕ್ಕಳಿಗೆ ಪಾಠ ಹೇಳುವ ಶಿಕ್ಷಕಿ ಜೇನ್ ಐರ್ ಮತ್ತು ಅವಳ ಶ್ರೀಮಂತ ಯಜಮಾನ Rochester ನಡುವಿನ ಪ್ರಣಯ ಸಂಗತಿಗಳನ್ನು ಈ ಕಾದಂಬರಿಯಲ್ಲಿ ವಿವರಿಸಲಾಗಿದೆ. ಅಂತ್ಯದಲ್ಲಿ ಜೇನ್ ಗೆ ಆರ್ಥಿಕ ಮತ್ತು ವೃತ್ತಿ ಸ್ವಾತಂತ್ರ್ಯ ದೊರೆತ ಬಳಿಕವಷ್ಟೇ ರೋಚೆಸ್ಟರ್ ನೊಂದಿಗೆ ಅವಳ ವಿವಾಹವಾಗುತ್ತದೆ. ಮಹಿಳೆಯರಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ ವಿಕ್ಟೋರಿಯನ್ ಸಮಾಜಕ್ಕೆ ಅವಳ ವಿಮೋಚನೆಯ ಸಾಧ್ಯತೆಗಳನ್ನು ಈ ಕಾದಂಬರಿ ತೋರಿಸಿತು ಎಂದು ಈ ಕಾದಂಬರಿಯನ್ನು ಕುರಿತಾಗಿ ಇರುವ ಬಹುತೇಕ ಓದುಗಳು ತಿಳಿಸಿವೆ. ಆದರೆ ಲಿಂಗ ಸಂಘರ್ಷದಷ್ಟೇ ಮುಖ್ಯವಾಗಿ ಈ ಕಾದಂಬರಿಯಲ್ಲಿರು ಜನಾಂಗೀಯ ವ್ಯತ್ಯಾಸಗಳನ್ನು ಈ ಬಹುತೇಕ ಓದುಗಳು ಮರೆಮಾಚಿವೆ.

ಜೇನ್ ಐರ್ ಮತ್ತು ರೋಚೆಸ್ಟರ್ ಮದುವೆಗೆ ಅಡ್ಡಿಯಾಗಿದ್ದವಳು Bertha Mason. ವೆಸ್ಟ್ ಇಂಡೀಸ್‌ನ Creole ಮೂಲನಿವಾಸಿ ಜನಾಂಗದ ಹೆಂಗಸು. ಇವಳು ರೋಚೆಸ್ಟರ್ ನ ಮೊದಲ ಹೆಂಡತಿ. ಹುಚ್ಚಿ, ಬಂಧಿತಳು. ಹುಚ್ಚಿನ ಉನ್ಮಾದದಲ್ಲಿ ಮನೆಗೆ ಬೆಂಕಿ ಹಚ್ಚಿ ಉರಿದುಹೋದವಳು. ಇಡೀ ಕಾದಂಬರಿಯಲ್ಲಿ ಅವಳನ್ನು ನಾವು ಎಲ್ಲೂ ಮುಖತಃ ಭೇಟಿಯಾಗುವುದೇ ಇಲ್ಲ. ಅವಳು ಕತ್ತಲೆ ಕೋಣೆಯಲ್ಲಿರುವ ಭೀಕರ ಆಕೃತಿ, ಅಸ್ಪಷ್ಟ ಮತ್ತು ಮೃಗೀಯ ನಡತೆಯವಳು. ಮಾನವೀಯವಾದ ಯಾವುದೇ ಗುರುತುಗಳನ್ನು ಅವಳಲ್ಲಿ ಕಾಣುವುದು ಅಸಾಧ್ಯ. ಅವಳು ಅಗೋಚರ ಮತ್ತು ಅನ್ಯ. ಯಾವುದೇ ವ್ಯಕ್ತಿ ಮತ್ತೊಬ್ಬರಿಗಿಂತ ಅನ್ಯ ಎಂದು ಹೇಳುತ್ತಿರುವಾಗಲೇ ಆ ಇಬ್ಬರು ಭಿನ್ನತೆತೋರಿಸಲಿಕ್ಕಾದರೂ ಪರಸ್ಪರರನ್ನು ಅವಲಂಬಿಸಿರುತ್ತಾರೆ ಎಂದು ಮರೆ[ತು] ಬಿಡುತ್ತೇವೆ. Bertha ಜೇನ್ ಳಂತೆ ಅಲ್ಲ ಆದರೆ ಅವ[ಳ] ವ್ಯತ್ಯಾಸದ ನೆಲೆಯಿರುವುದೇ ಅವರಿಬ್ಬರ[ೂ] ರೋಚೆಸ್ಟರ್‌ನ ಹೆಂಡತಿಯರು ಎಂಬ ಸಾಮ್ಯತೆಯ[ಲ್ಲಿ] ಇವರಿಬ್ಬರೂ ಅವನ ಬಂಧಿಗಳು. ಜನಾಂಗೀಯ ಭಿನ್ನ[ತೆ] ಜೇನ್ ಐರ್ ಕಾದಂಬರಿಯಲ್ಲಿ ಯಾವ ರೀ[ತಿ] ರಚಿತವಾಗಿದೆಯೆಂದರೆ Bertha ಏಕಕಾಲಕ್ಕೆ ಅನ[್ಯ,] ಮೃಗೀಯ, ಮನುಷ್ಯರಂತಲ್ಲದವಳು ಮತ[್ತು] ಬಿಳಿಯವನ ಹೆಂಡತಿ. 'ಅನ್ಯ'ರ ಈ ಅಸ್ಪಷ್ಟ ಸ್ಥಿ[ತಿ] ಹೆದರಿಸುತ್ತದೆ, ಗೊಂದಲ ಉಂಟುಮಾಡುತ್ತ[ದೆ] ಹಾಗಾಗಿಯೇ ಅಪಾಯಕಾರಿಯಾಗಿದೆ. ಇಂತ[ಹ] 'ಅಪಾಯಕಾರಿ ಅನ್ಯ'ರು Canonical ಇಂಗ್ಲೀ[ಷ್] ಸಾಹಿತ್ಯದಲ್ಲಿ ಬಹುಜನರಿದ್ದಾರೆ.

ಮಾನವ ಅಸ್ಮಿತೆಯನ್ನು ಕುರಿತು ಇರುವ ಪಾಶ್ಚಾ[ತ್ಯ] ಅಭಿಪ್ರಾಯಗಳು ಬದಲಾವಣೆಯನ್ನು ನಿರಾಕರಿಸುವ ಸಾರ್ವತ್ರಿಕ, ಐತಿಹಾಸಿಕ ಕಟ್ಟುವಿಕೆಗಳು. ಇಲ್ಲಿ ಅ[ನ್ಯ] ಜಾತಿ/ಜನಾಂಗದವರು, ಪೌರಾತ್ಯ ಮೂಲನಿವಾಸಿಗಳ[ು,] ಹೊರಗುಳಿದವರು, ಪರಿಧಿಗೆ ಸರಿದವರು, ದಬ್ಬಾಳಿ[ಕೆ]ಯಲ್ಲಿ ನಲುಗಿದವರು. ಪಾಶ್ಚಾತ್ಯ ಓದು ಹಾಗ[ೂ] ಬರಹಗಳಲ್ಲಿರುವ ಈ ತರಹದ ಐಡಿಯಲಾಜಿಕಲ[್] ಹೇರುವಿಕೆಯನ್ನು 'ಅನ್ಯ' ರ ಅಸ್ಮಿತೆಯ ಮರ[ು] ಓದುಗಳು ಭಿನ್ನವಾಗಿ ಕಟ್ಟಿಕೊಡುತ್ತವೆ. ಈ ಓದುಗಳ[ು] ದ್ವಿ/ಬಹು ಓದುಗಳನ್ನು ಗುರುತಿಸಿ, ಬಹುತ್ವವನ[್ನು] ಒಪ್ಪಿಕೊಳ್ಳುತ್ತಲೇ, ವೈರುಧ್ಯಗಳನ್ನು ಪ್ರಶ್ನಿಸುತ್ತಾ, ಅನ್ಯ[ರ] ರ‍್ಯಾಡಿಕಲ್ ಧೋರಣೆಗಳನ್ನು ಎತ್ತಿಹಿಡಿಯುತ್ತವ[ೆ.] Edward Said ಈ ತರಹದ ಓದುಗಳನ[್ನು] Contrapuntal reading ಎಂದು ಹೆಸರಿಸುತ್ತಾನ[ೆ.] ಜೇನ್ ಐರ್ ಳ ಮುಕ್ತಿ Bertha ಳಂತಹ ಅನ್ಯಳನ[್ನು] ವಸ್ತುನಿಷ್ಠವಾಗಿ ಓದುವ ಕ್ರಮದಲ್ಲಿ ಮಾತ್ರವೇ ಇದೆ. Jean Rhys ತನ್ನ Wide Sargasso Se[a] ಕಾದಂಬರಿಯಲ್ಲಿ Bertha Mason ಳ ಕತೆಯನ[್ನು] 'ಅನ್ಯ'ರ ದೃಷ್ಟಿಯಿಂದ ಚಿತ್ರಿಸಿದ್ದಾಳೆ. □

ಕೃಪೆ : "An Introduction to Literature Criticismand Theory" by Andrew Bennet an[d] Nicholas Royle.

ಗುರಿಮುಟ್ಟುವುದಕ್ಕಿಂತ ಭರವಸೆಯಿಂದ ಪ್ರಯಾಣ ಮಾಡುವುದು ಲೇಸು.
– ಆರ್.ಎಲ್. ಸ್ಟೀವನ್‌ಸನ್

## ಎಮಿಲಿ ಡಿಕಿನ್ಸನ್ ಮತ್ತು ಸಾವು - ಒಂದು ವಿಶ್ಲೇಷಣೆ

ಸಾಂಪ್ರದಾಯಿಕ ಲ್ಯಾಟಿನ್ ಮತ್ತು ಒರಟಾದ ಆಂಗ್ಲೋ ಸಾಕ್ಸನ್ (Anglo Saxon) ಸಂಯುಕ್ತ ಭಾಷಾ ಪ್ರಯೋಗವನ್ನು ಎಮಿಲಿ ಡಿಕಿನ್ಸನ್‌ಳ (1830-1886) ಕಾವ್ಯದಲ್ಲಿ ಕಾಣಬಹುದು. 19ನೇ ಶತಮಾನದ ಅಮೇರಿಕಾದ ಮೇರು ಕವಯತ್ರಿ ಎಮಿಲಿ ಡಿಕಿನ್ಸನ್ ಸಾಹಿತ್ಯ ಪ್ರಪಂಚಕ್ಕೆ ತನ್ನನ್ನು ತಾನು ಅನಾವರಣ ಮಾಡಿಕೊಂಡ ರೀತಿ ಸಾಹಿತ್ಯ ಪ್ರೇಮಿಗಳಿಗೆ ಒಂದು ಅಚ್ಚರಿ. ಅಮೇರಿಕಾದ ಚಿಕ್ಕ ಪಟ್ಟಣ ಅಮ್ಹರೆಸ್ಟ ನಲ್ಲಿ ಹುಟ್ಟಿ ತನ್ನ ಮೂವತ್ತನೇ ವಯಸ್ಸಿಗೆ ಲೌಕಿಕ ಸುಖಭೋಗಗಳನ್ನು ತ್ಯಜಿಸಿ ಏಕಾಂತ ಬದುಕನ್ನು ಆಯ್ಕೆ ಮಾಡಿಕೊಂಡು, ಒಬ್ಬ ಸನ್ಯಾಸಿನಿಯಂತೆ ಬದುಕನ್ನು ನೋಡಿದ್ದರ ಫಲವಾಗಿ ಪಡೆದ ಜೀವನಾನುಭವವನ್ನು 1775 ಕವನಗಳ ಮೂಲಕ ಕಾವ್ಯಲೋಕಕ್ಕೆ ಅರ್ಪಣೆ ಮಾಡಿರುತ್ತಾಳೆ. ಎಮಿಲಿಯ ಕಾವ್ಯದಲ್ಲಿ ಹುಟ್ಟು-ಸಾವು, ಪ್ರೀತಿ ಮತ್ತು ಪ್ರಕೃತಿಯಿಂದ. ಆಯ್ದ ರೂಪಕಗಳು ಮತ್ತೆ ಮತ್ತೆ ಕಾಣಸಿಗುತ್ತವೆ. ನಮ್ರ-ವಿನಮ್ರ, ಭಯ-ಧೈರ್ಯ, ಕೌಟುಂಬಿಕ-ಜಾಗತಿಕ ಭಾವನೆಗಳು ಸೂಕ್ತವಾಗಿ ಸಂಸ್ಕಾರಗೊಂಡಿವೆ.

ಸಾವನ್ನು ವಿಶ್ಲೇಷಿಸುವ ಈಕೆಯ ಜನಪ್ರಿಯ ಪದ್ಯ 'ರಥ' (Chariot). ಈ ಪದ್ಯದಲ್ಲಿ ಸಾವಿನ ಪರಿಕಲ್ಪನೆ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಇಲ್ಲಿ ಸಾವು ಒಂದು ಪಾತ್ರ. ಸಾಮಾನ್ಯವಾಗಿ 'ಸಾವು' ಎಲ್ಲರಲ್ಲಿ ಭೀತಿ ಮತ್ತು ತಲ್ಲಣಗಳನ್ನು ಉಂಟುಮಾಡುತ್ತದೆ. ಈ ಪದವು ನಿಷ್ಕ್ರೀಯತೆಯ ಸಂಕೇತವಾಗಿದೆ. ಜಡತೆಯೆಂಬುದು ಸಾವು ಮತ್ತು ಚಲನಶೀಲತೆಯೆಂಬುದು ಬದುಕು ಎಂದು ನಾವು ತಿಳಿದಿರುತ್ತೇವೆ. ಆದ್ದರಿಂದ ಯಾವ ವ್ಯಕ್ತಿಯು ಜಡವಾಗಲು ಬಯಸುವುದಿಲ್ಲ. ಸದಾ ಬದುಕಬೇಕೆಂಬುದು ಮಾನವ ಸಹಜ ಹಂಬಲವಾಗಿದೆ. ಕ್ರಮೇಣ ಈ ಹಂಬಲವು ವ್ಯಾಮೋಹವಾಗಿ ಪರಿಣಮಿಸಿದೆ. ಈ ಅದಮ್ಯ ಒತ್ತಾಸೆಯನ್ನು ಪೂರೈಸಿಯೇ ತೀರುತ್ತೇನೆ ಎಂಬ ಭ್ರಮೆಯಲ್ಲಿ ಮನುಷ್ಯನಿದ್ದಾನೆ. ಹುಟ್ಟು ಸಹಜ ; ಸಾವು ಖಚಿತವೆಂಬ ನಿಸರ್ಗ ಸತ್ಯವನ್ನು ಒಪ್ಪುವುದಿಲ್ಲ. ಯಾರೂ ಬಯಸದ, ಪ್ರೀತಿಸದ, ಆರಾಧಿಸದ ವಿಷಯವೆಂದರೆ 'ಸಾವು' ಮಾತ್ರ. ಇದು ಅಪ್ರಿಯವಾದುದು. ಆದರೂ ಇದು ಬದುಕಿನ ಸಹಜ ಪ್ರಕ್ರಿಯೆಯಾಗಿದೆ. ಪ್ರಕೃತಿ ಸಹಜವಾದ ಈ ಕ್ರಿಯೆಯನ್ನು ಅಸಹಜಗೊಳಿಸಲು ಹಾಗು ಜಯಿಸಲು ವಿಶೇಷವಾಗಿ ಆಧುನಿಕ ಮನುಷ್ಯನು ಸದಾ ಪ್ರಯತ್ನಿಸುತ್ತಿರುತ್ತಾನೆ. ಸಾವನ್ನು ಗೆಲ್ಲಲು ತನ್ನೆಲ್ಲಾ ಜ್ಞಾನ, ಬುದ್ಧಿಶಕ್ತಿ, ಅಧಿಕಾರ ಮತ್ತು ಸಂಪತ್ತನ್ನು ಬಳಸಿ ಸಾವನ್ನು ಮೆಟ್ಟಿ ಅದರ ಅಧಿಪತಿಯಾಗಲು ಚಿಂತನೆ ಮಾಡುತ್ತಾನೆ. ಮಾನವನ ಸಹಜ ಪ್ರವೃತ್ತಿಯಾದ ಸಾವನ್ನು ಎಮಿಲಿಡಿಕಿನ್ಸನ್ ತನ್ನ ಪದ್ಯ 'ರಥ' ದಲ್ಲಿ ವಿಭಿನ್ನ ನೆಲೆಯಲ್ಲಿ ವಿಶಿಷ್ಟವಾಗಿ ರಚಿಸಿದ್ದಾಳೆ. ಈ ಕವಿತೆಯು

"Because I could not stop for death...
He kindly stopped for me...

ಎಂಬುದಾಗಿ ಪ್ರಾರಂಭವಾಗುತ್ತದೆ. ಕವಿತೆಯ ಆರಂಭದಲ್ಲಿಯೇ ಸಾವಿಗೆ ವ್ಯಕ್ತಿತ್ವವನ್ನು ಆರೋಪಿಸಿ ತನ್ನ ವ್ಯವಹಾರವನ್ನು ಉಲ್ಲೇಖಿಸುತ್ತಾಳೆ. ಕವಯತ್ರಿಯು ಸಾವನ್ನು ತಡೆಯುವುದಿಲ್ಲ. ಏಕೆಂದರೆ ಸಾವು ಸಭ್ಯತೆಯಿಂದ ರಥವನ್ನು ತನಗಾಗಿ, ತನ್ನ ಸಹಪ್ರಯಾಣಕ್ಕಾಗಿ ನಿಲ್ಲಿಸಿದನೆಂದು ಆಕೆ ನಂಬಿದ್ದಾಳೆ. ಇಲ್ಲಿ ಸಾವು ವ್ಯಕ್ತಿರೂಪಕವಾಗಿದೆ. ಈ ವ್ಯಕ್ತಿಯು ರಥದ ಸಾರಥಿಯಂತೆ ರಥಾರೂಢನಾಗಿ ಕವಯತ್ರಿಯ ಮನೆಯ ಮಾರ್ಗವಾಗಿ ಆಗಮಿಸುವಾಗ ನಾಗರೀಕನಂತೆ ಸಭ್ಯವಾಗಿ ವರ್ತಿಸುತ್ತಾನೆ ಅನ್ನುವ ಅವಳ ಭಾವ, ಅತೀಂದ್ರಿಯ ಕಾಲ್ಪನಿಕ ಕಾವ್ಯಶಕ್ತಿಗೆ ಹಿಡಿದ ಕೈಗನ್ನಡಿಯಾಗಿದೆ. ಸಾಮಾನ್ಯವಾಗಿ ಸಾವಿನ-ರಥಾರೂಡ ಸಾರಥಿಯು

ರೌದ್ರತೆಯಿಂದಲೂ, ಕ್ರೂರತೆಯಿಂದಲೂ, ಧರ್ಪದಿಂದಲೂ, ಜಾಗ್ರತೆಯಿಂದಲೂ ಹಾಗು ಗಾಂಭೀರ್ಯದಿಂದಲೂ ಇರುವನೆಂಬ ನಂಬಿಕೆ ನಮ್ಮದು. ಆದರೆ 'ರಥ' ಪದ್ಯದಲ್ಲಿ ಸಾವು ಒಬ್ಬ ಯುವರಾಜಕುಮಾರ, ಪ್ರೇಮಿ. ಸಾವಿನ ಪ್ರಿಯತಮೆಯಾಗಿ ಅನನ್ಯತೆಯ ಹೊಸದಿಗಂತದ ಕಡೆ ತನ್ನ ಮಹಾಯಾನವನ್ನು ಆನಂದದಿಂದ ಎಮಿಲಿ ಆರಂಭಿಸುತ್ತಾಳೆ. ಸಾವನ್ನೇ ಆಲಂಗಿಸಿ ಸಾವಿನೊಂದಿಗೆ ಪ್ರೀತಿಯ ಅನಂತವನ್ನು ಕಾಣುವ ಸಂಭ್ರಮಕ್ಕೆ ಅನುಭೂತಿಯಾಗುತ್ತಾಳೆ. ಸಾವಿನ ಅನಂತ ಮಹಾ ಮನೆಗೆ ಈ ಅಮರ ಪ್ರೇಮಿಗಳು ಚಲಿಸುವಾಗ ಕವಯತ್ರಿಯ ನಲ್ಲನು ಯಾವುದೇ ಆತುರವಿಲ್ಲದೆ, ಪ್ರಸನ್ನನಂತಿದ್ದು ನಾಗರೀಕನಂತೆ ವರ್ತಿಸಿದನೆಂಬುದನ್ನು ಅನುಭಾವಿಸುತ್ತಾಳೆ. ಇಹಲೋಕದ ತನ್ನೆಲ್ಲಾ ಒತ್ತಾಸೆಗಳನ್ನು/ ಆಕರ್ಷಣೆಗಳನ್ನು ಬದಿಗೊತ್ತಿ ಬಯಲಾಗಿ ಮಿತ ವಿಶ್ರಾಂತವನ್ನು ಮರೆತು ಅಮಿತವಾದ ಚಿರಶಾಂತಿಯ ಅದೃಶ್ಯ ವೃತ್ತದತ್ತ ಮುನ್ನಡೆಯುತ್ತಾಳೆ. ನಲ್ಲನ ವಿನಮ್ರತೆಗೆ, ವಿವೇಕಕ್ಕೆ ಮನಸೋತು ಮಣಿದು ತನ್ನನ್ನು ತಾನು ಮರೆಯುತ್ತಾಳೆ.

ತನ್ನ ಬಹುಪಾಲು ಖಾಸಗಿ ಜೀವನವನ್ನು ಏಕಾಂಗಿಯಾಗಿ ಕಳೆದ ಎಮಿಲಿ ಡಿಕಿನ್ಸನ್ ಸಾಮಾಜಿಕ ಜೀವನದಿಂದ ಹೊರಗುಳಿದಿದ್ದವಳು. ಆದರೆ ಸಾವಿನ ಜೊತೆಯಲ್ಲಿ ತನ್ನ ಸಹಪ್ರಯಾಣದ ಮಾರ್ಗದಲ್ಲಿ ಬಹು ದಿನಗಳ ನಂತರ, ತನ್ನ ಬಾಲ್ಯದ ತುಣುಕುಗಳನ್ನು, ತಾನು ಕಂಡ ಶಾಲಾಮಕ್ಕಳ ನಲಿದಾಟಗಳನ್ನು, ಹೊಲಗದ್ದೆಗಳಲ್ಲಿ ಮೇಯುವ ಹಸುಗಳ ಹಿಂಡನ್ನು ನೋಡುತ್ತಾ ನಲ್ಲನೊಡನೆ ಸೂರ್ಯಾಸ್ತವನ್ನು ದಾಟಿ ಸಾವಿನ ಮನೆಯನ್ನು ತಲುಪುತ್ತಾಳೆ. ಸೃಷ್ಟಿಯಲ್ಲಿ ವಾಸ್ತವವಾಗಿ ಯಾವೊಬ್ಬ ವ್ಯಕ್ತಿಯೂ ಸಾವಿನ ಮನೆಯ ಅನುಭವವನ್ನು ಕಂಡು ಅರಿತ ಸಾಕ್ಷಿಗಳಿಲ್ಲ. ಕೆ.ಎಸ್. ನರಸಿಂಹಸ್ವಾಮಿಯವರು ಚಿತ್ರಿಸಿರುವ,

"ಆದರವಿರದ, ಭಾವಣಿಕಾಣದ, ಕದವಿರದ
ತಿರುಗಿಬಾರದ, ಆದಿಯಿರದ ಆ ಕಡೆ ಮನೆಗೆ........"

ಈ ಪ್ರೇಮಿಗಳು ಸಾಗುತ್ತಾರೆ. ಅನುಭಾವಿ (mystic) ಕವಯತ್ರಿ ಎಮಿಲಿಗೆ ಈ ಸಾವಿನ ಮನೆಯಲ್ಲಿ ಭೂಲೋಕದಲ್ಲಿದ್ದಂತೆ ಕಾಲಚಕ್ರದ ಚಲನವಲನ ವಿಲ್ಲದೆ ಶತಮಾನಗಳು ಕ್ರಮಿಸಿದರೂ ಒಂದೇ ದಿನ ಕಳೆದಂತೆ ಭಾಸವಾಗುತ್ತದೆ. ಮರಣೋತ್ತರ ಸ್ಥಿತಿಗೆ ಸಹಜವೆಂಬಂತೆ ಕುದುರೆಗಳು ಆದಿ ಅಂತ್ಯಗಳಿಲ್ಲದ ದಿಕ್ಕಿಗೆ ನೋಡುತ್ತಲೇ ಇವೆ ಎಂದು ಸಂಶಯದೊಂದಿಗೆ ಈ ಸಾವಿನ ಪದ್ಯ ಕೊನೆಗೊಳ್ಳುತ್ತದೆ,

"I first surmised the horses heads
Were towards eternity."

'Because I could not stop for death' ಪದ್ಯವು ಸಾವಿಗೆ ಜೀವಕಳೆಯನ್ನು ತುಂಬಿ, ಒಬ್ಬ ವ್ಯಕ್ತಿಯನ್ನಾಗಿ ಚಿತ್ರಿಸಿ ಆತನನ್ನು ಒಲಿಸಿ–ವರಿಸಿರುವುದನ್ನು ತಿಳಿಸುತ್ತದೆ. ಸಾವೇ ನೋವು ಎಂದು ಪರಿಭಾವಿಸಲಾಗಿರುವ ಮಾನವ ಪ್ರಪಂಚದಲ್ಲಿ ಎಮಿಲಿ ಡಿಕಿನ್ಸನ್ ಸಾವನ್ನು ಅನುಭಾವಿಸಿರುವುದು ಒಂದು ವಿಭಿನ್ನ ಪ್ರಯತ್ನ ವಾಗಿದೆ. ಸಾಕ್ರೆಟಿಸ್ ಮತ್ತು ಯೇಸುಕ್ರಿಸ್ತ ನಂತಹವರು ಸಾವನ್ನು ಸಂತೋಷವಾಗಿ ಅನುಭವಿಸಿದರು ಎಂಬುದನ್ನು ಚರಿತ್ರೆಯ ಪುಟಗಳು ಕಂಡಿವೆ. ಅಕ್ಕಮಹಾದೇವಿಯು ಚನ್ನಮಲ್ಲಿಕಾರ್ಜುನನ್ನನೇ ತನ್ನ ಪತಿಯನ್ನಾಗಿ ಆರಾಧಿಸುವ ಮೂಲಕ ಐಕ್ಯವಾದಂತೆ ಎಮಿಲಿಡಿಕಿನ್ಸನ್ ಸಾವಿನೊಂದಿಗೆ ನಡೆಸಿರುವ ಅನುಸಂದಾನ ಈ ಪದ್ಯದಲ್ಲಿ ಸೊಗಸಾಗಿ ಮೂಡಿದೆ.

– ಶ್ರೀನಿವಾಸಪ್ಪ .ಜಿ.
9964529900

**Prathispanda Kannada Monthly literary cultural periodical**
**Title verification no KARKAN 22840/10/1/2012 TC**

## ಪ್ರತಿಸ್ಪಂದದ ಆಶಯಗಳು

BOOK - Post

೧. ಅನ್ಯಭಾಷಾ ಸಾಹಿತ್ಯವನ್ನು ಮಾತೃಭಾಷೆ ಯಲ್ಲಿಯೇ ಗ್ರಹಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ.

೨. ಸಾಹಿತ್ಯವನ್ನು ಸೃಷ್ಟಿಸುತ್ತಿರುವ ಅಧಿಕಾರಗಳು, ಪ್ರಕ್ರಿಯೆಗಳು, ವಿಧಾನಗಳು ಮತ್ತು ದೃಷ್ಟಿ ಕೋನಗಳನ್ನು ಪರಿಚಯಿಸಿಕೊಳ್ಳುವುದು.

೩. ಸಾಹಿತ್ಯ/ಭಾಷೆ ಸೃಷ್ಟಿಸುತ್ತಿರುವ ಸಂಸ್ಕೃತಿ ಯನ್ನು ಅರ್ಥೈಸಿಕೊಳ್ಳುವುದು.

೪. ಪಾಶ್ಚಿಮಾತ್ಯ ಸಾಹಿತ್ಯ ಪ್ರಾಕಾರಗಳಲ್ಲಿ ಕಂಡು ಬರುವ ಪರಿಕಲ್ಪನೆಗಳು, ಶೈಲಿ-ರೂಪಗಳು, ನೋಟ-ದೋರಣೆಗಳು ಸ್ಥಳೀಯ ಸಾಹಿತ್ಯ ಸಂದರ್ಭದಲ್ಲಿ ಸೃಷ್ಟಿಸುತ್ತಿರುವ ಸಂಕರಗಳನ್ನು, ಬಹುತ್ವವನ್ನು ಅರ್ಥಮಾಡಿಕೊಳ್ಳುವುದು.

೫. ಪ್ರಸಕ್ತ ಜಾಗತಿಕ ಮಟ್ಟದಲ್ಲಿ ರಚಿತ ವಾಗುತ್ತಿರುವ ಸಾಹಿತ್ಯ/ಸಾಂಸ್ಕೃತಿಕ ಬರಹ/ ಸಿದ್ಧಾಂತಗಳು ದೇಶೀಯ ಸಾಹಿತ್ಯದ ಮೇಲೆ ಬೀರುತ್ತಿರುವ ಪ್ರಭಾವಗಳನ್ನು ಅಭ್ಯಾಸಿಸುತ್ತಾ ಸಾಹಿತ್ಯದ ಬಗೆಗಿನ ಅಭಿರುಚಿಯನ್ನು ಗಾಢವಾಗಿಸಿಕೊಳ್ಳುವುದು.

೬. ಇತಿಹಾಸದ ಹರಿವಿನಲ್ಲಿ ಆಗಿ-ಹೋದ ಸಾಹಿತ್ಯ ಕೃತಿಗಳ ಪ್ರಸ್ತುತತೆಯನ್ನು ವಿವರಿಸಿಕೊಳ್ಳುವುದು.

೭. ಮಾನವ ಘನತೆಯನ್ನು ಎತ್ತಿ ಹಿಡಿಯುವ ಮಾನವೀಯ ಎಳೆಯ ನಿರಂತರತೆಯ ಬೆಳಕಿನಡಿಯಲ್ಲಿ ಸಾಹಿತ್ಯದ ನಿಜ ವಿದ್ಯಾರ್ಥಿಗಳಾಗುವುದು.

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur